KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ನವೆಂಬರ್ ೧೧, ೨೦೧೦ (ಕಾರ್ತೀಕ ೨೦, ಶಕ ವರ್ಷ ೧೯೩೨) | ಸಂಚಿಕೆ ೪೫ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಕನ್ನಡ ಭವನದ ವಸತಿಯೇತರ ಸೇವಾ ತೆರಿಗೆ ಹಾಗೂ ಉಪಕರಣಗಳ ಶುಲ್ಕ ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 40 ಕಸನಿ 2010, ದಿನಾಂಕ : 19–3–2010
2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರ ಸಂಖ್ಯೆ : ಕಸನಿ 23 ಆಡಳಿತ 2009–10, ದಿನಾಂಕ 28–4–2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 19–3–2010ರ ಸರ್ಕಾರಿ ಆದೇಶದಲ್ಲಿ ಕನ್ನಡ ಭವನದ ವಸತಿಯೇತರ ಸೇವಾ ತೆರಿಗೆ ಹಾಗೂ ಉಪಕರಣಗಳ ಶುಲ್ಕವನ್ನು ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರಪಾಲಿಕೆ, ಬೆಂಗಳೂರು ಇವರಿಗೆ ಪಾವತಿಸಲು 2009–10 ನೇ ಸಾಲಿನ ಲೆಕ್ಕ ಶೀರ್ಷಿಕೆ 2205–00–001–0–01–059 (ಯೋಜನೆ) ಮತ್ತು ಆಡಳಿತದಡಿಯಲ್ಲಿ ರೂ. 20,09,778/–ಗಳನ್ನು ಬಿಡುಗಡೆ ಮಾಡಿ ಸರ್ಕಾರವು ಆದೇಶಿಸಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ : 28–4–2010ರ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರು ಕನ್ನಡ ಭವನದ 2006–07, 2007–08, 2009–10 ನೇ ಸಾಲಿನ ವಸತಿಯೇತರ ಸೇವಾ ತೆರಿಗೆ ಹಾಗೂ ಉಪಕರಣಗಳ ಶುಲ್ಕ ಪಾವತಿ ಮಾಡಲು ರೂ. 20,09,778/–ಗಳನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2205–00–001–0–01–059 (ಯೋಜನೆ)ಯಡಿ ಮಂಜೂರು ಮಾಡಲಾಗಿದ್ದು, ಆರ್ಥಿಕ ವರ್ಷದ ಕೊನೆಯಲ್ಲಿ ಸದರಿ ಲೆಕ್ಕ ಶೀರ್ಷಿಕೆಯಲ್ಲಿ ಹಣದ ಲಭ್ಯತೆಯಿಲ್ಲವಾದ್ದರಿಂದ ಸದರಿ ಮೊತ್ತವನ್ನು ಖಜಾನೆಯಿಂದ ಡ್ರಾ ಮಾಡಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ ರೂ. 20,09,778/–ಗಳನ್ನು ಪ್ರಸಕ್ತ ಸಾಲಿನ ಲೆಕ್ಕ ಶೀರ್ಷಿಕೆ 2205–00–102–4–31–059 (ಯೋಜನೆ) ಕನ್ನಡ ಮತ್ತು ಸಂಸ್ಕೃತಿಗೆ ಪ್ರೋತ್ಸಾಹ ಇದರಡಿ ಭರಿಸಿ ಮಂಜೂರು ಮಾಡಬೇಕೆಂದು ಕೋರಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 40 ಕಸನಿ 2010, ಬೆಂಗಳೂರು, ದಿನಾಂಕ : 5–8–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಕನ್ನಡ ಭವನದ ವಸತಿಯೇತರ ಸೇವಾ ತೆರಿಗೆ ಹಾಗೂ ಉಪಕರಣಗಳ ಶುಲ್ಕವನ್ನು ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರಪಾಲಿಕೆ, ಬೆಂಗಳೂರು ಇವರಿಗೆ ಪಾವತಿ ಮಾಡಲು ರೂ. 20,09,778/– (ರೂ. ಇಪ್ಪತ್ತು ಲಕ್ಷ ಒಂಭತ್ತು ಸಾವಿರದ ಏಳುನೂರ ಎಪ್ಪತ್ತೆಂಟು ಮಾತ್ರ) ಗಳನ್ನು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಬಿಡುಗಡೆಗೊಳಿಸಿ ಆದೇಶಿಸಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–102–4–31–059 (ಯೋಜನೆ) ಕನ್ನಡ ಮತ್ತು ಸಂಸ್ಕೃತಿ ಪ್ರೋತ್ಸಾಹ ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಸರ್ಕಾರದ ಆದೇಶ ಸಂ : ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ:16–5–2008ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ. ಆರ್. 2111

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಯುತರುಗಳಾದ ಜಿ.ಎಂ. ಕಾಂತರಾಜ್, ಪಿ.ಐ., ವಿಜಯಕುಮಾರ್, ಮಾಜಿ ಪಿ.ಎಸ್.ಐ., ನಂಜುಂಡಯ್ಯ, ಮಾಜಿ ಎ.ಎಸ್.ಐ. ಮಡಿವಾಳ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ಇವರ ಆದೇಶ ಸಂಖ್ಯೆ : 73/ಡಿಇ–1/ಆರ್6/2006, ದಿನಾಂಕ 30–3–2009.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ : ಸಿಬಿ(8) 14/2009–10, ದಿನಾಂಕ 1–9–2009.
3) ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 24–9–2009 & 25–9–2009.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಸಿಬಿ(8) 14/2009–10, ದಿನಾಂಕ : 13–11–2009.
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 219 ಸಿಎನ್‌ಎಸ್ 09, ದಿನಾಂಕ : 20–3–2010.

**ಪ್ರಸ್ತಾವನೆ :**

ಶ್ರೀ ಜಿ.ಎಂ. ಕಾಂತರಾಜ್, ಪಿ.ಐ., ಶ್ರೀ ವಿಜಯಕುಮಾರ್, ಪಿ.ಎಸ್.ಐ., ಮತ್ತು ಶ್ರೀ ನಂಜುಂಡಯ್ಯ, ಎ.ಎಸ್.ಐ. ಮಡಿವಾಳ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಬೇಜವಾಬ್ದಾರಿತನ ಮತ್ತು ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರ ಜೊತೆಗೆ 8ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

1. ಶ್ರೀ ಜಿ.ಎಂ. ಕಾಂತರಾಜ್, ಪಿ.ಐ., ಮಡಿವಾಳ ಪೊಲೀಸ್ ಠಾಣೆ :–

" ಶ್ರೀ ಜಿ.ಎಂ. ಕಾಂತರಾಜ್, ಪಿ.ಐ., ಆದ ನೀವು 2006ನೇ ಸಾಲಿನಲ್ಲಿ ಮಡಿವಾಳ ಪೊಲೀಸ್ ಠಾಣೆಯ ಠಾಣಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸಿರುತ್ತೀರಿ. ಈ ಹುದ್ದೆಯಲ್ಲಿ ಠಾಣೆಯ ಆಗು ಹೋಗುಗಳಿಗೂ ನೀವೇ ಜವಾಬ್ದಾರಿ ಅಧಿಕಾರಿಯಾಗಿದ್ದು ದಿನಾಂಕ : 3–8–2006ರಂದು ದಿನಚರಿಯಲ್ಲಿ 17–55 ಗಂಟೆಯಲ್ಲಿ ಅಪರಿಚಿತ ವ್ಯಕ್ತಿಯ ಲಾಶ್ ಒಂದು ದೊರಕಿದ್ದರ ಬಗ್ಗೆ ನಮೂದು ಇದ್ದರೂ ನೀವು ಇದನ್ನು ಪರಿಶೀಲಿಸದೇ ಠಾಣೆಯ ಆಗು ಹೋಗುಗಳ ಬಗ್ಗೆ ತೀವ್ರ ನಿರ್ಲಕ್ಷತೆ ತೋರಿರುತ್ತೀರಿ.

ಈ ಲಾಶನ್ನು ಕುರಿತು ನಿಮ್ಮ ಕೈಕೆಳಗಿನ ಅಧಿಕಾರಿಗಳು ಯಾವ ಕ್ರಮ ಜರುಗಿಸಿರುತ್ತಾರೆಂಬುದನ್ನು ನೀವು ದಿನಾಂಕ : 10–8–2006 ರವರೆಗೆ ಗಮನಿಸಿರುವುದಿಲ್ಲ. ನಿಮ್ಮ ಕಣ್ಣಡಿಯಲ್ಲಿಯೇ ಇರುವ ನಿಮ್ಮ ಅಧೀನಾಧಿಕಾರಿಗಳು ಮೃತನ ಲಾಶನ್ನು ಬೇಜವಾಬ್ದಾರಿ ವರ್ತನೆ ತೋರಿ ಸೆಂಟ್ ಜಾನ್ ಆಸ್ಪತ್ರೆಯ ಅನಾಟಮಿ ವಿಭಾಗಕ್ಕೆ ಕಳುಹಿಸಿರುತ್ತಾರೆ.

ದಿನಾಂಕ : 5–8–2006 ರಂದು ವೆಂಕಟೇಶ್ ಎಂಬುವರು ತಮ್ಮ ತಂದೆ ಕಾವೇರಪ್ಪ ರವರು ಕಾಣೆಯಾಗಿದ್ದಾರೆಂದು ಠಾಣೆಯಲ್ಲಿ ವರದಿಸಿದ್ದರೂ, ಈ ವಿಷಯದ ಕುರಿತು ನಿಮ್ಮ ಗಮನ ಹರಿದಿರುವುದಿಲ್ಲ ದಿನಾಂಕ : 6–8–2006 ರಂದು ಇದೇ ವ್ಯಕ್ತಿ ತನ್ನ ಸ್ವಯಂ ಪ್ರಯತ್ನದಿಂದಲೇ ದಿನಾಂಕ 3–8–2006 ರಂದು ದೊರಕಿದ ಮೃತ ವ್ಯಕ್ತಿಯ ಲಾಶ್ ತನ್ನ ತಂದೆಯದೇ ಎಂದು ಗುರ್ತಿಸಿ ಪಿರ್ಯಾದು ನೀಡಿದ ತದನಂತರವೂ ಠಾಣೆಯಲ್ಲಿ ಯು.ಡಿ.ಆರ್. ನಂ. 87/06 ಪ್ರಕರಣ ದಾಖಲಾದಾಗಲೂ ನೀವು ಈ ಕುರಿತು ಯಾವ ಆಸಕ್ತಿಯನ್ನು ತೋರದೆ ನಿಷ್ಕಾಳಜಿ ತೋರಿ ತನಿಖೆಯನ್ನು ನಿಮ್ಮ ಅಧೀನಾಧಿಕಾರಿಗಳಿಗೆ ಬಿಟ್ಟಿರುತ್ತೀರಿ. ಅಂದು ಲಾಶಿನ ಮಹಜರ್ ಕ್ರಮ ಜರುಗಿಸಿದ ಅಧಿಕಾರಿಯು ಬೇಜವಾಬ್ದಾರಿಯುತ ಶವ ತಪಾಸಣಾ ವರದಿ ತಯಾರಿಸಿದ್ದರೂ ಸಹ ನೀವು ಈ ನಿಟ್ಟಿನಲ್ಲಿ ನಿಮ್ಮ ಗಮನ ಹರಿಸಿರುವುದಿಲ್ಲ.

ಮೃತನ ಲಾಶಿನ ಪರೀಕ್ಷೆಯನ್ನು ವಿಕ್ಟೋರಿಯಾ ಆಸ್ಪತ್ರೆಯ ವೈದ್ಯರು ನಡೆಸಿ ಲಾಶಿನ ಮೇಲೆ 33 ಗಂಭೀರ ಸ್ವರೂಪದ ಗಾಯಗಳನ್ನು ಗುರುತಿಸಿ, ಇದೊಂದು ಬರ್ಬರ ದುರ್ಮರಣದ ಪ್ರಕರಣವೆಂದು ವರದಿಸಿದಾಗಲೇ ಈ ವರದಿಯ ಹಿನ್ನೆಲೆಯ ಅನಿವಾರ್ಯ ಕಾರಣಗಳಿಂದಾಗಿ ನೀವು ಕಣ್ತೆರೆದು ದಿನಾಂಕ : 10–8–2006 ರಂದು ಕೊಲೆ ಪ್ರಕರಣವನ್ನು ದಾಖಲಿಸಿರುತ್ತೀರಿ.

ಆ ನಂತರವು ನೀವು ಅಸಮರ್ಪಕ ಮತ್ತು ಬೇಕಾಬಿಟ್ಟಿ ತನಿಖೆ ನಡೆಸಿದ ಕಾರಣ ಬಂಧಿಸಿದ ಆರೋಪಿಯನ್ನು ನ್ಯಾಯಾಲಯವು ಜಾಮೀನಿನ ಮೇಲೆ ಬಿಡುವುದಲ್ಲದೆ ನಿಮ್ಮ ತನಿಖೆಯ ಸಾಚಾತನದ ಬಗ್ಗೆ ತನ್ನ ಸಂದೇಹಗಳನ್ನು ವ್ಯಕ್ತಪಡಿಸಿರುತ್ತದೆ. ನಿಮ್ಮಿಂದ ನಡೆದ ಈ ಲೋಪಗಳಿಂದಾಗಿ ದಿನಾಂಕ : 13–9–2006 ರಂದು ಈ–ಟಿವಿ ಚಾನೆಲ್‌ನ 'ಕ್ರೈಂ ಡೈರಿ' ಯಲ್ಲಿ "ಹೆಣಗಳ ಮಾರಾಟ" ವೆಂಬ ಕಾರ್ಯಕ್ರಮವನ್ನು ಬಿತ್ತರಿಸಿದ್ದು, ನಗರದ ಇಡೀ ಪೊಲೀಸ್ ಇಲಾಖೆ ಮುಖಭಂಗ ಅನುಭವಿಸಿ ತಲೆ ತಗ್ಗಿಸುವಂತಾಗಿರುತ್ತದೆ.

ಈ ಎಲ್ಲಾ ಕಾರಣಗಳಿಂದಾಗಿ ಒಂದು ಪೊಲೀಸ್ ಠಾಣೆಯ ಸಂಪೂರ್ಣ ಜವಾಬ್ದಾರಿ ಹೊಂದಿದ್ದ ಪ್ರಮುಖ ಅಧಿಕಾರಿಯಾಗಿ ನೀವು ನಿಮ್ಮ ಕರ್ತವ್ಯಲೋಪತೆ, ಅಧೀನ ಅಧಿಕಾರಿಗಳ ಮೇಲಿನ ನಿಯಂತ್ರಣ ಹಾಗೂ ಹತೋಟಿ ವೈಫಲ್ಯ ಮತ್ತು ಠಾಣೆಯ ಆಗು ಹೋಗುಗಳ ಬಗ್ಗೆ ತೀವ್ರತರವಾದ ಔದಾಸೀನ್ಯತೆ ತೋರಿ ಒಂದು ಕೊಲೆ ಪ್ರಕರಣದಲ್ಲಿ ನೊಂದವರಿಗೆ ನ್ಯಾಯ ಸಿಗದೇ ಹೋಗಲು ಕಾರಣರಾಗಿರುತ್ತೀರಿ.

ನೀವುಗಳು ಶಿಸ್ತು ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಮೊ.ಸಂ. : 510/06, ಕಲಂ 302 ಐಪಿಸಿ ಕೇಸಿನಲ್ಲಿ ಸರಿಯಾಗಿ ತನಿಖೆ ಕೈಗೊಳ್ಳದೆ ಕರ್ತವ್ಯದಲ್ಲಿ ತೀವ್ರ ಅಶಿಸ್ತು, ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ. ಆದ್ದರಿಂದ ಆರೋಪಿ ಪೊಲೀಸ್ ಅಧಿಕಾರಿಗಳಾದ ನಿಮ್ಮ ವಿರುದ್ಧ ಮೇಲ್ಕಂಡಂತೆ ಆರೋಪವನ್ನು ಹೊರಿಸಲಾಗಿದೆ."

2. **ಶ್ರೀ ವಿಜಯಕುಮಾರ್, ಪಿ.ಎಸ್.ಐ., ಮಡಿವಾಳ ಪೊಲೀಸ್ ಠಾಣೆ :-**

**ದೋಷಾರೋಪಣೆ :**

ನೀವು ಬೆಂಗಳೂರು ನಗರ ಮಡಿವಾಳ ಪೊಲೀಸ್ ಠಾಣೆಯಲ್ಲಿ 2006ನೇ ಸಾಲಿನಲ್ಲಿ ಪೊಲೀಸ್ ಸಬ್-ಇನ್ಸ್‌ಪೆಕ್ಟರ್ ಆಗಿ ಕರ್ತವ್ಯ ನಿರ್ವಹಿಸಿರುತ್ತೀರಿ. ದಿನಾಂಕ : 3-8-2006 ರಂದು ನಿಮ್ಮ ಠಾಣೆಯ ಠಾಣಾ ದಿನಚರಿ ನಮೂದಿನ ಪ್ರಕಾರ ಸಂಜೆ 5-30 ಗಂಟೆಗೆ ಸರಹದ್ದಿನಲ್ಲಿ ಗಸ್ತು ಮಾಡಲು ತೆರಳಿರುತ್ತೀರಿ.

ನಿಮ್ಮ ಠಾಣೆಯ ವ್ಯಾಪ್ತಿಯ ಕಾಸಿಯ ಲಾಡ್ಜ್‌ನ ಪರಿಸರಕ್ಕೆ ಹೋದ ನೀವು ಅಲ್ಲಿ ಕಂಡು ಬಂದ ಅಪರಿಚಿತ ವ್ಯಕ್ತಿಯ ಲಾಶಿನ ಬಗ್ಗೆ ಹೋಟೆಲ್‌ನ ಮಾಲೀಕ ನಜೀಬ್ ರವರಿಂದ ಜಾಳು ಜಾಳಾದ ಅತ್ಯಂತ ಅಸಮರ್ಪಕ ಹಾಗೂ ಬೇಕಾಬಿಟ್ಟಿಯ ಮಹಜರ್ ಒಂದನ್ನು ಮುಖ್ಯ ಪೇದೆ-440 ಆದಿರಾಜ್‌ರವರ ಸಹಕಾರದೊಂದಿಗೆ ತಯಾರಿಸಿ ಸದರಿ ಮೃತ ದೇಹವನ್ನು ಸೆಂಟ್ ಜಾನ್ ಆಸ್ಪತ್ರೆಯ ಅನಾಟಮಿ ವಿಭಾಗಕ್ಕೆ ಕಳುಹಿಸಿಕೊಟ್ಟಿರುತ್ತೀರಿ.

ನೀವೊಬ್ಬ ಜವಾಬ್ದಾರಿ ಹುದ್ದೆಯ ಅಧಿಕಾರಿಯಾಗಿದ್ದು, ಮೃತ ದೇಹದ ಮೇಲೆ ಕಂಡು ಬಂದ ಗಾಯಗಳು ನಜೀಬ್‌ರವರು ಹೇಳಿದಂತೆ ಆಗಲು ಶಕ್ಯವೇ ಇಲ್ಲವೇ ಎಂಬುದನ್ನು ಪರಿಶೀಲನೆಗೆ ಮತ್ತು ತನಿಖೆಗೆ ಒಳಪಡಿಸಿರುವುದಿಲ್ಲ. ಮೃತನ ಗುರುತನ್ನು ಪತ್ತೆ ಹಚ್ಚಲು ಕ್ರಮ ಜರುಗಿಸಿರುವುದಿಲ್ಲ. ಶರೀರದ ಛಾಯಾ ಚಿತ್ರ ಮತ್ತು ಬೆರಳಚ್ಚು ಪಡೆಯುವಲ್ಲಿ ತೀವ್ರ ಸ್ವರೂಪದ ನಿಷ್ಕಾಳಜಿ ಬೇಜವಾಬ್ದಾರಿತನ ತೋರಿರುತ್ತೀರಿ.

ಈ ರೀತಿಯ ಗಂಭೀರ ಸ್ವರೂಪದ ಪ್ರಕರಣ ನಿಮ್ಮ ಗಮನಕ್ಕೆ ಬಂದಾಗ್ಯೂ ನೀವೇ ಠಾಣೆಗೆ ಹಿಂತಿರುಗಿ ಯು.ಡಿ.ಆರ್. ಪ್ರಕರಣ ದಾಖಲಿಸಲು ಹಿಂಜರಿತ ತೋರಿ ಕರ್ತವ್ಯ ವಿಮುಕತೆ ಪ್ರದರ್ಶಿಸಿದ್ದೀರಿ, ಮೃತನು ಈ ಸ್ಥಳಕ್ಕೆ ಹೇಗೆ ಬಂದಿರಬಹುದು ಎಂಬ ಬಗ್ಗೆ ನಿಖರ ಮಾಹಿತಿಯನ್ನು ಸಾಕ್ಷಿಗಳ ವಿಚಾರಣೆ ಮತ್ತು ಸಾಂದರ್ಭಿಕ ಸಾಕ್ಷ್ಯಾಧಾರಗಳನ್ನು ಸಂಗ್ರಹಿಸಲು ವೈಫಲ್ಯ ತೋರಿದ್ದೀರಿ. ಸೆಂಟ್ ಜಾನ್ ಆಸ್ಪತ್ರೆಯ ವೈದ್ಯಾಧಿಕಾರಿಗಳಿಂದಲೂ ಮೃತನ ಮೈಮೇಲಿನ ಗಾಯಗಳ ಬಗ್ಗೆ ವರದಿ ಪಡೆದು ಈ ನಿಟ್ಟಿನಲ್ಲಿ ಕ್ರಮ ಜರುಗಿಸುವಲ್ಲಿ ಸಹ ನೀವು ತೀವ್ರ ಸ್ವರೂಪದ ನಿಷ್ಕಾಳಜಿ ಮತ್ತು ಬೇಜವಾಬ್ದಾರಿತನ ತೋರಿ ಕರ್ತವ್ಯ ಲೋಪ ತೋರಿದ್ದೀರಿ.

ನೀವು ಅಂದೇ ಠಾಣೆಗೆ ಹಿಂದಿರುಗಿ, ನಡೆಸಿದ ನಡುವಳಿಗಳ ಕುರಿತು ಠಾಣಾ ದಿನಚರಿಯಲ್ಲಿ ನಮೂದಿಸುವುದರಲ್ಲೂ ಬೇಜವಾಬ್ದಾರಿತನ ತೋರಿದ್ದೀರಿ ಹಾಗೂ ನೀವು ಕಂಡುಕೊಂಡ ವಿಷಯಗಳನ್ನು ಮೇಲಾಧಿಕಾರಿಗಳಿಗೆ ತಿಳಿಸುವ ಕನಿಷ್ಠ ಪ್ರಯತ್ನವನ್ನು ಸಹ ಮಾಡದೇ ಕೊಲೆ ಮೊಕದ್ದಮೆಯೊಂದು ಪ್ರಾಥಮಿಕ ಹಂತದಲ್ಲಿ ಹಳೀ ತಪ್ಪುವಂತೆ ನಡೆದುಕೊಂಡಿರುತ್ತೀರಿ. ಈ ರೀತಿ ದೊರೆತ ಅಪರಿಚಿತ ವ್ಯಕ್ತಿಯ ಲಾಶಿನ ಗುರುತಿನ ಬಗ್ಗೆ ಠಾಣೆಯ ಬೀಟ್ ಸಿಬ್ಬಂದಿಗಳಿಗೆ ತಿಳಿಸುವುದರಲ್ಲಿ, ಠಾಣಾ ನೋಟೀಸ್ ಬೋರ್ಡ್‌ನಲ್ಲಿ ಪ್ರಕಟಗೊಳಿಸುವುದಾಗಲೀ, ದಿನ ಪತ್ರಿಕೆಗಳು ಮತ್ತು ಇತರೆ ಮಾಧ್ಯಮಗಳಲ್ಲಿ ಈ ವಿಚಾರವು ಪ್ರಕಟಗೊಳ್ಳಲು ಸಿ.ಓ.ಪಿ., ಕಛೇರಿಯ ಸಾರ್ವಜನಿಕ ಸಂಪರ್ಕಾಧಿಕಾರಿಗಳ ಸಹಾಯವನ್ನು ಪಡೆಯುವಲ್ಲಿ ನೀವು ವೈಫಲ್ಯ ತೋರಿರುತ್ತೀರಿ.

ನಿಮ್ಮ ಮತ್ತು ಮುಖ್ಯ ಪೇದೆ ಆದಿರಾಜು ರವರ ಮುಚ್ಚುಮರೆ ನಡವಳಿಕೆ, ಈ ರೀತಿ ಲಾಶ ಅನ್ನು ವಿಲೇವಾರಿಗೊಳಿಸುವಲ್ಲಿ ನಿಮಗೆ ವೈಯುಕ್ತಿಕ ಹಿತಾಸಕ್ತಿಗಳು ಇತ್ತೆಂದು ತೋರಿದ್ದು, ಇದು ಅತ್ಯಂತ ಹೀನಾಯ ನಡವಳಿಕೆಯಾಗಿರುತ್ತದೆ."

3. **ಶ್ರೀ ನಂಜುಂಡಯ್ಯ, ಎ.ಎಸ್.ಐ. :-**

**ದೋಷಾರೋಪಣೆ :**

ಶ್ರೀ ನಂಜುಂಡಯ್ಯ, ಸಹಾಯಕ ಪೊಲೀಸ್ ಸಬ್-ಇನ್ಸ್‌ಪೆಕ್ಟರ್, ಆದ ನೀವು 2006ನೇ ಇಸವಿಯಲ್ಲಿ ಬೆಂಗಳೂರು ನಗರ ಮಡಿವಾಳ ಪೊಲೀಸ್ ಠಾಣೆಯಲ್ಲಿ ಎ.ಎಸ್.ಐ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಿರಿ.

1) ದಿನಾಂಕ : 3-8-2006 ರಂದು ಸಂಜೆ ಸುಮಾರು 5-55 ಗಂಟೆ ಸಮಯಕ್ಕೆ ನೀವು ಮಡಿವಾಳ ಠಾಣೆಯ ಪ್ರಭಾರದಲ್ಲಿದ್ದಿರಿ. ಆ ಸಮಯದಲ್ಲಿ ನಿಮ್ಮ ಪೊಲೀಸ್ ಠಾಣಾ ಸರಹದ್ದಿನ ಕಾಸಿಯ ಲಾಡ್ಜ್‌ನ ಮ್ಯಾನೇಜರ್‌ರವರಾದ ನಜೀಬ್ ಎಂಬುವರು ತಮ್ಮ ಹೊಟೇಲ್ ಆವರಣದಲ್ಲಿ ಅಪರಿಚಿತ ವ್ಯಕ್ತಿಯೊಬ್ಬನ ಮೃತ ಶರೀರ ಕಂಡು ಬಂದುದ್ದಾಗಿ ದೂರೊಂದನ್ನು ನೀಡಿದ್ದು, ತಾವು ಠಾಣಾ ಸೀಮಿಸ್ ನಂ. 1135/06 ರಲ್ಲಿ ದಾಖಲಿಸಿರುತ್ತೀರಿ. ಆದರೆ ವಾಸ್ತವದಲ್ಲಿ ನೀವೆ ಠಾಣೆಯ ಅಧಿಕಾರಿಯಾಗಿದ್ದು, ಮುಖ್ಯ ಪೇದೆ-440, ಆದಿರಾಜು ರವರು, ನಜೀಬ್ ರವರ ಹೇಳಿಕೆಯನ್ನು ಕೃತ್ಯ ನಡೆದ ಸ್ಥಳದಲ್ಲಿ ಪಡೆದು ತಮ್ಮ ಕೈಗೆ ಹಸ್ತಾಂತರಿಸಿದ ತರುವಾಯ, ತಾವು ವಾಸ್ತವಾಂಶವನ್ನು ಇದ್ದಂತೆ ದಾಖಲಿಸದೆ, ನಿಮ್ಮ ಇಷ್ಟಾನುಸಾರ ದಿನಚರಿಯ ನಮೂದನ್ನು ಮಾಡಿರುತ್ತೀರಿ.

   ಹೀಗೆ ನಮೂದಿಸಿದ ತರುವಾಯ ಸ್ಥಳಕ್ಕೆ ತೆರಳಿ ಈ ವ್ಯಕ್ತಿಯ ಸಾವಿಗೆ ಕಾರಣಗಳನ್ನು ಸಾಕ್ಷ್ಯಾಧಾರಗಳ ವಿಚಾರಣೆ, ಸಾಂದರ್ಭಿಕ ಸಾಕ್ಷಿಗಳ ಮತ್ತು ಮೃತನ ಶರೀರದ ಪರೀಕ್ಷೆಯಿಂದ ತಿಳಿಯಬೇಕಾದ ನೀವು, ಇದ್ಯಾವುದನ್ನು ಮಾಡದೆ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಲೋಪ ಮತ್ತು ಅಸಡ್ಡೆಯನ್ನು ತೋರಿ ಒಂದು ಕೊಲೆ ಪ್ರಕರಣವನ್ನು ಕ್ಲುಪ್ತ ಕಾಲದಲ್ಲಿ ಬೆಳಕಿಗೆ ತರಲು ವಿಫಲರಾಗಿ ಅನ್ಯಾಯವೆಸಗಿದ್ದೀರಿ.

2) ದಿನಾಂಕ : 5-8-2006 ರಂದು ನೀವು ಪುನಃ ಮಡಿವಾಳ ಪೊಲೀಸ್ ಠಾಣೆಯ ಪ್ರಭಾರೆಯಲ್ಲಿದ್ದ ಅಧಿಕಾರಿಯಾಗಿರುತ್ತೀರಿ. ಅಂದು ಮಧ್ಯಾಹ್ನ 2-20 ಗಂಟೆ ಸಮಯದಲ್ಲಿ ವೆಂಕಟೇಶ್ ಬಿನ್ ಕಾವೇರಪ್ಪ ಎಂಬುವರು ಪೊಲೀಸ್ ಠಾಣೆಗೆ ಹಾಜರಾಗಿ ತಮ್ಮ ತಂದೆ ಕಾವೇರಪ್ಪ ದಿನಾಂಕ : 2-8-2006 ರಿಂದ ಕಾಣೆಯಾದ ಬಗ್ಗೆ ನೀಡಿದ ದೂರನ್ನು ಸ್ವೀಕರಿಸಿರುತ್ತೀರಿ ಹಾಗೂ ಕಾಣೆಯಾದ ಕೇಸನ್ನು ದಾಖಲು ಮಾಡಿರುತ್ತೀರಿ ಆದರೆ ದಿನಾಂಕ : 3-8-2006 ರಂದು ಸಿಕ್ಕಿದ ಮೃತ ಶರೀರಕ್ಕೂ ಸಂಬಂಧವಿದೆಯೇ ಎಂಬ ಬಗ್ಗೆ ನಡೆಸಬೇಕಾಗಿದ್ದ ಪ್ರಾಥಮಿಕ ವಿಚಾರಣೆಯನ್ನು ಸಹ ನೀವು ನಡೆಸದೆ ತೀವ್ರ ಸ್ವರೂಪದ ಬೇಜವಾಬ್ದಾರಿ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 30-3-2009ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿದ್ದಾರೆ. ಶ್ರೀ ವಿಜಯಕುಮಾರ ಇವರು ಅಮಾನತ್ತಿನ ಅವಧಿ ದಿನಾಂಕ: 17-10-06 ರಿಂದ 14-12-06 ರ ವರೆಗೆ ಹಾಗೂ ಶ್ರೀ ನಂಜುಂಡಯ್ಯ ಇವರು

ದಿನಾಂಕ 17–10–2006 ರಿಂದ 28–11–2006ರ ವರೆಗಿನ ಅಮಾನತ್ತಿನ ಅವಧಿಯನ್ನು ಈ ಅವಧಿಯಲ್ಲಿ ಪಡೆದ ಜೀವನಾಧಾರ ಭತ್ಯೆಗೆ ಸೀಮಿತಗೊಳಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 1–9–2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರುಗಳು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರುಗಳಿಗೆ ನೀಡಿರುವ ದಂಡನೆಯು ತೀವ್ರತರದ್ದಾಗಿದ್ದು, ಇವರು ಇಲ್ಲಿಯವರೆಗೆ ಸಲ್ಲಿಸಿದ ಸೇವೆಯನ್ನು, ಇನ್ನು ಮುಂದೆ ಸಲ್ಲಿಸಬಹುದಾದ ಸೇವೆಯನ್ನು ಗಮನದಲ್ಲಿಟ್ಟುಕೊಂಡು ಮಾನವೀಯತೆಯ ದೃಷ್ಟಿಯಿಂದ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಲು ಸರ್ಕಾರವು ತೀರ್ಮಾನಿಸಿ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 172 ಪೊಸೆಅ 2009, ಬೆಂಗಳೂರು, ದಿನಾಂಕ : 29–3–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಯುತರಾದ ಜಿ.ಎಂ. ಕಾಂತರಾಜ್, ಪಿ.ಐ., ವಿಜಯಕುಮಾರ್, ಪಿ.ಎಸ್.ಐ., ಮತ್ತು ನಂಜುಂಡಯ್ಯ, ಎ.ಎಸ್.ಐ., ಇವರುಗಳಿಗೆ ಶಿಸ್ತು ಪ್ರಾಧಿಕಾರದ ದಿನಾಂಕ : 30–3–09 ದಂಡನೆಯನ್ನು ಭಾಗಶಃ ಮಾರ್ಪಡಿಸಿ ಈ ಕೆಳಕಂಡಂತೆ ಆದೇಶಿಸಿದೆ.

1. ಅರ್ಜಿದಾರರುಗಳನ್ನು ಸೇವೆಗೆ ಪುನರ್ ನೇಮಕ ಮಾಡಲಾಗಿದೆ.
2. ಇವರುಗಳು ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನಕ್ಕೆ ಮೂರು ವರ್ಷಗಳ ಕಾಲ ಸಂಚಿತ ಪರಿಣಾಮ ಸಹಿತ (with cummulative effect) ವಾಗಿ ಇಳಿಸಿದೆ. ದಂಡನೆಯ ಅವಧಿಯಲ್ಲಿ ಇವರುಗಳು ಯಾವುದೇ ವಾರ್ಷಿಕ ವೇತನ ಬಡ್ತಿಯಾಗಲಿ ಅಥವಾ ಪದೋನ್ನತಿಯಾಗಲಿ ಪಡೆಯಲು ಅರ್ಹರಿರುವುದಿಲ್ಲ. ಇವರುಗಳ ವೇತನವು ಈ ಮೂರು ವರ್ಷಗಳ ಅವಧಿಯಲ್ಲಿ ಸ್ಥಿರವಾಗಿರುತ್ತದೆ.
3. ಇವರುಗಳನ್ನು ಸೇವೆಗೆ ಪುನರ್ ನೇಮಕ ಮಾಡಿದ ದಿನಾಂಕದಿಂದ ಈ ದಂಡನೆಯು ಜಾರಿಗೆ ಬರುತ್ತದೆ.
4. ದಂಡನಾವಧಿಯಾದ ಮೂರು ವರ್ಷಗಳು ಪೂರ್ಣಗೊಂಡ ನಂತರ ಇವರುಗಳ ವೇತನವನ್ನು ಇವರುಗಳು ದಂಡನಾವಧಿಯ ಪೂರ್ವದಲ್ಲಿ ಪಡೆಯುತ್ತಿದ್ದ ಮೂಲ ವೇತನದಿಂದ ವಾರ್ಷಿಕ ವೇತನ ಬಡ್ತಿಗಳನ್ನು ನೀಡತಕ್ಕದ್ದಾಗಿರುತ್ತದೆ.
5. ಶ್ರೀ ವಿಜಯಕುಮಾರ್, ಮಾಜಿ, ಪಿ.ಎಸ್.ಐ. ಮತ್ತು ಶ್ರೀ ನಂಜುಂಡಯ್ಯ, ಮಾಜಿ ಎ.ಎಸ್.ಐ., ಇವರುಗಳ ಅಮಾನತ್ತಿನ ಅವಧಿ ಅನುಕ್ರಮವಾಗಿ ದಿನಾಂಕ : 17–10–2006 ರಿಂದ 14–12–2006ರ ವರೆಗೆ ಮತ್ತು ದಿನಾಂಕ : 17–10–2006 ರಿಂದ 28–11–2006ರ ವರೆಗಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.
6. ಇವರುಗಳು ಸೇವೆಯಿಂದ ವಜಾಗೊಂಡ ದಿನಾಂಕದಿಂದ ಸೇವೆಗೆ ಪುನರ್ ನೇಮಕಗೊಂಡು ಕರ್ತವ್ಯಕ್ಕೆ ವರದಿ ಮಾಡಿಕೊಂಡ ದಿನಾಂಕದವರೆಗಿನ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿಯೆಂದು (Dies-Non) ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ. ಆರ್. 2112

## INFRASTRUCTURE DEVELOPMENT SECRETARIAT

**Sub :** Release of GOK's Share towards Shimoga-Talaguppa gauge conversion project-Reg.

**Read :**
1. G.O.No. IDD 52 NSW 2007, dated 24-7-2007.
2. G.O.No. IDD 52 NSW 2007, dated 19-9-2007.
3. G.O.No. IDD 52 NSW 2007, dated 26-12-2007.
4. G.O.No. IDD 52 NSW 2007, dated 19-8-2009.
5. G.O.No. IDD 52 NSW 2007, dated 4-1-2010.
6. G.O.No. IDD 52 NSW 2007, dated 19-3-2010.
7. Letter no. W 63CN/BNC/MR/B/GL, dated 24-4-2010 of Chief Engineer (Con.,) SWR, Bangalore.

**PREAMBLE :**

In the Government Order referred to at Sl. No. (1) to (6) above, Government of Karnataka has released an amount of Rs. 97.54 crore towards cost sharing for Shimoga-Talaguppa gauge conversion project with the condition of having an MoU with railways for sharing this project on 50:50 cost sharing basis and getting matching share from MoR.

2. The Chief Engineer, South Western Railways, Bangalore in his letter read at Sl. No. (7) above, has requested for balance deposit of 50% share of Government of Karnataka as the project is targeted for commissioning in the current Financial year the share of Government of Karnataka comes to Rs. 3.48 crore.

3. The proposal of Raiways has been examined and it has been decided to release an amount of Rs. 3.48 out of the Budget of Rs. 272.50 crore provided under the Head of Account "5465-01-190-3-05" (Plan) 211 investment towards cost sharing for new railway projects during 2010-11. Hence this order.

**GOVERNMENT ORDER NO. IDD 52 NSW 2007, BANGALORE DATED: 24-7-2010.**

After careful examination of the request of Railways, Government is pleased to release an amount of Rs. 3.48 crore (Rupees Three crore Forty eight lakhs only) towards Shimoga-Talaguppa gauga conversion project being the part of the balance 50:50 share of Government of Karnataka.

2. The expenditure shall be met under the Head of Account "5465-01-190-3-05" (Plan) 211 investment out of the budget provision Rs. 272.50 crore towards cost sharing for new railway projects during 2010-11.

3. Railways have to furnish the approval obtained from the Railway Board for the revised cost along with the utilization certificate for the amount so far released.

4. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Western Railway, Bangalore.

3. This order is issued in accordance with the concurrence of Finance Department given vide, U.O. Note. No. FD 1227 Exp-I/2010, dated 19-7-2010.

By Order and in the name of the Governor of Karnataka,

**K.S. Venugopal**

Under Secretary to Government, (i/c)

Infrastructure Development Department.

P.R.2113

## INFRASTRUCTURE DEVELOPMENT SECRETARIAT

**Sub :** Determination of fare structure for High Speed Rail Link facility from City to Bangalore International Airport at Devanahalli.

**Read :** 1. G.O.No. IDD 40 DIA 2002, dated 26-12-2007.

**2.** G.O.No. IDD 40 DIA 2002, dated 28-2-2009.

**PREAMBLE :**

In 2006 the Government accorded in principle approval for High Speed Rail Link (HSRL) from City (M.G. Road, Parade Ground-CAT), to Bangalore International Airport at Devanahalli. The Delhi Metro Rail Corporation (DMRC) was commissioned through M/s iDeck for preparation of the Detailed Project Report (DPR).

In the Government Order dated 26-12-07 read at (1) above, sanction of the Government was accorded for implementation of HSRL to the Bangalore International Airport and appointing Karnataka State Industrial Investment & Development Corporation (KSIIDC) as nodal agency for the project and also authorizing KSIIDC to engage the services of Delhi Metro Rail Corporation (DMRC) as project consultants to assist the Special Purpose Vehicle (SPV) in the implementation of project. KSIIDC has constituted an SPV in the name of Bangalore Airport Rail Link Ltd. (BARL) as authorized in Clause V of the said order for implementing the Project. The order also authorized the Infrastructure Development Department to take all necessary steps to give effect to the decisions in the said order.

On the basis of DPR submitted by DMRC, Government of Karnataka accorded sanction for the implementation of the HSRL project on PPP-BoT basis vide G.O. No. IDD 40 DIA 2002, dated 28-2-2009 read at (2) above.

The completion cost of the project was initially estimated by DMRC at Rs. 3716 Crores (June 2007 prices).

The reworked current cost of HSRL worked out to Rs. 4313 crores excluding the cost of Government lands.

In the Government order read at (2) above, sanction was accorded

(i) To pursue with the project of High Speed Rail Link with alignment from M.G. road (Parade Ground-CAT) to Bangalore International Airport via Cubbon Road, Chowdaiah Road, Ramana Maharishi road and Bellary road and the corridor after Hebbal to be positioned 22.5 meters from the median of the existing National Highway-7.

(ii) Revised cost of the project of Rs. 4313 crores (current cost excluding cost of Government and BBMP lands) and resultant completion cost of Rs. 5767 crores.

(iii) To reckon the land required as mentioned below :-

| | | |
|---|---|---|
| 1 | Government Land | |
| | BBMP Land | 0.96 hectares |
| | Other Govt. land | 12.20 hectares |
| 2 | Private Lands | |
| | NHAI lands | 8.61 hectares |
| | Other Private land | 44.19 hectares |
| | Total | 65.96 hectares |

And to meet the cost of Rs. 532 crores for acquisition of private & NHAI lands. The lands of BBMP & Government to be transferred free of cost to the project.

(iv) To extend the BBMP area to cover Bangalore International Airport (BIA) area ;

(v) Amend the Mysore Tramway Act 1905, as required in respect of determination of fare, Safety Certification and the items that could be carried by passengers in the HSRL etc.,

(vi) To execute HSRL on PPP basis with necessary Viability Gap Funding (VGF) By Government of India-VGF of 20% is (Rs. 1047.00 crores) through the Special Purpose Vehicle, Bangalore Airport Rail Link Limited (BARL).

Though the Government had approved the DPR prepared by the DMRCL, wherein the fare structure was proposed that would be adopted at the time of commencing the operations of Airport Rail Link, no order specifying the fare structure, safety certification and the items that could be carried by passengers in the HSRL was not issued as the same had to be done in accordance and after amendment to the Mysore Tramway Act 1905.

The Government have felt it necessary to specify the fares for HSRL subject to the conditions in para (v) of the G.O. dated 28-2-2009. Read at Sl. No. 2 above. Hence the following order.

**GOVERNMENT ORDER NO. IDD 154 DIA 2007, BANGALORE DATED: 24-7-2010.**

Government after careful examination specifies the fare structure to be adopted at the time of commencing the operations of the Airport Rail Link as under, subject to the conditions in para (v) of the G.O. dated 28-2-2009.

From CAT at Police grounds to International Airport - Rs. 200/-
From Hebbal to International Airport - Rs. 150/-
From Yelahanka to International Airport - Rs. 100/-

2. The above fare structure will also be subject to revision keeping the increase in fuel cost and the project cost.

By Order and in the name of the Governor of Karnataka,

**(K.S. Venugopal)**

Under Secretary to Government, (i/c)

P.R.2114 Infrastructure Development Department.

## HEALTH AND FAMILY WELFARE SECRETARIAT

**Sub :** Enhancement of rates for Contracting-in Specialists services-reg.

**Read :** 1. Govt. Order No. HFW/KHSDRP/Sect-43/2007-08, Bangalore Dated 2-4-2008.

2. Proceedings of the 20th Meeting of Programme Steering Committee, dated : 17th and 22nd June 2010.

**PREAMBLE :**

In the Government Order read at (1) above, Government have accorded approval for contracting-in-specialists to Government health facilities having vacant posts of Specialists or in some cases based on actual requirements of specialists based on health challenge in particular areas, with remuneration to be paid to the specialists to be contracted-in as per the following rates :

Maternal and Child Health :-A retention fee of Rs. 5000/- on monthly basis for availability at all times, incentive for conducting LSCS in first referral hospitals of Rs. 1500/- for gynaecologists, Rs. 1000/- for anaesthetists, Rs. 500/- for paediatricians.

General Specialists :- A retention fee of of Rs. 5000/- on monthly basis for availability at all times, Rs. 1000/- per day for OPD, for at least 2 days of OPD in a week.

Apart from this, various rates per visit and per surgical procedure were also approved.

While several attempts have been made to fill up the posts of specialists, a large number of vacancies still exist, particularly in the less developed taluks. Despite retention fees and fees for procedures to specialists, access to these specialized services in the 6-C districts of the State, remains poor. In view of the above, a technical committee was constituted on 26-2-2010 to review and recommend a revised fee structure for payment to specialists for surgical and emergency procedures.

The recommendations of the Technical Committee were places in the 20th meeting of the Programme Steering Committee dated : 17-6-2010 & 22-6-2010.

After detailed discussions, the Programme Steering Committee has approved for enhancement of rates for contracting-in specialists subject to approval from the Project Governing Board.

Hence the following order :

**GOVERNMENT ORDER NO. HFW/KHSDRP/Sect-43/2007-08, BANGALORE DATED: 31-7-2010.**

For the reasons as explained in the preamble, approval of the Government is accorded for the following :-

| Sl.No. | Category | Existing Retention Fee per month (in Rs.) | Proposed Retention Fee per month (in Rs.) | | Existing per month on Contract Basis (In NRHM) (in Rs.) | Proposed per month on contract Basis (in Rs.) | |
|---|---|---|---|---|---|---|---|
| | | | C-Dists & Uttara Kannada, Kodagu, Bellary Districts | Other Districts | | C-Dists & Uttara Kannada, Kodagu, Bellary Districts | Other Districts |
| 1 | General Specialists | 5,000 | 10,000 | 8,000 | - | 65,000 | 50,000 |
| 2 | MCH Specialists (Obstetrician, Paediatrician & Anaesthetist) | 5,000 | 10,000 | 8,000 | 50,000 | 70,000 | 50,000 |

The anaesthetists contracted-in under NRHM have to render anaesthetic services to all MCH and other surgical procedures as and when asked for.

For the MCH Specialists :

(1) Retention fee, visiting fee and surgical fee shall be drawn under NRHM additionalities and

(2) For those procured on contract basis in :

(a) C-districts, Uttara Kannada, Kodagu and Bellary districts out of the remuneration of Rs. 70,000/- per month, Rs. 50,000/- shall be drawn under NRHM additionalities and Rs. 20,000/- shall be drawn from KHSDRP funds.

(b) Other districts the remuneration of Rs. 50,000/- per month shall be drawn under NRHM additionalities.

For the General Specialists, all remunerations/fees shall be drawn from KHSDRP funds.

Also, the following rates per visit, for the specialists procured on retention fee basis, were approved :

| Sl. No. | Medical Emergencies | Proposed rate per visit per patient (in Rs.) | Proposed maximum rate per patient per day (in Rs.) |
|---|---|---|---|
| 1 | Myocardial Infarction | 100 | 500 |
| 2 | Cardio Vascular Accidents | 100 | 500 |
| 3 | Cerebro Vascular Accidents | 100 | 500 |
| 4 | Acute Respiratory Infection | 100 | 500 |
| 5 | Foreign Bodies in Airo Digestive Tract | 100 | 500 |
| 6 | Chest Injuries | 100 | 500 |
| 7 | Status Asthmaticus | 100 | 500 |
| 8 | Acute Renal Failure | 100 | 500 |
| 9 | Coma (Shock) | 100 | 500 |
| 10 | Acute Congestive Glaucoma (Eye). | 100 | 500 |
| 11 | Acute Poisoning | 100 | 500 |
| 12 | Snake Bite | 100 | 500 |
| 13 | Pulmonary Embolism (newly added) | 100 | 500 |
| 14 | Fanthombolism (newly added) | 100 | 500 |

Also, the following rates per surgical Procedure, for the specialists procured on retention fee basis, were approved :

| Sl.No. | Surgical Emergencies | Existing rates Rate per Surgery (in Rs.) | Proposed rates per surgery in C-districts & Uttara Kannada, Kodagu, Bellary districts (in Rs.) | Proposed new rates per surgery in other districts (in Rs.) |
|---|---|---|---|---|
| 1 | Burns Injuries more than 30% | 1,000 | 1,500 | 1,000 |
| 2 | Acute Appendicities | 1,500 | 3,000 | 2,000 |
| 3 | Perforations (Abdominal) | 3,000 | 4,500 | 3,000 |
| 4 | Colic Attacks (pain leading to laparotomy) | 3,000 | 4,500 | 3,000 |
| 5 | Bleeding Haemmorhoids | 500 | 3,000 | 2,000 |
| 6 | Foreign Bodies Implanted in the Eye | 300 | 750 | 500 |
| 7 | Lens induced Glaucoma (Eye) | 1,500 | 2,000 | 1,500 |
| 8 | Tracheostomy | 1,000 | 2,000 | 1,500 |
| 9 | Supra Pubic cystotomy | 1,000 | 3,000 | 2,000 |
| 10 | Acute Abscess | 300 | 750 | 500 |
| 11 | Acute Cellulites due to snake bite | 500 | 750 | 500 |
| 12 | Acute Retention of Urine | 500 | 1,500 | 1,000 |
| 13 | Acute Management of shocks | 500 | 750 | 500 |
| 14 | Diabetics Ketosis | - | 750 | 500 |
| 15 | Diabetics Non Ketosis | - | 750 | 500 |
| | **Emergency Obstetric & Gynaecological Conditions** | | | |
| 1 | Rupture Uterus | 2,000 | 4,500 | 3,000 |
| 2 | Tubal Pregnancy | 2,000 | 4,500 | 3,000 |
| 3 | Accidental Haemorrhage | 1,000 | 3,000 | 2,000 |
| 4 | Uterine Bleeding | 2,000 | 3,000 | 2,000 |
| 5 | Uterine Perforation | 2,000 | 4,500 | 3,000 |
| 6 | Injury-Genito Urinary Tract | 2,000 | 3,000 | 2,000 |
| 7 | Foreign body in Genito Urinary Tract | 500 | 750 | 500 |
| 8 | Abortions | 300 | 1,500 | 1,000 |
| 9 | Retention of Placenta | 1,000 | 2,000 | 1,500 |
| 10 | Obstructed Labour | 1,000 | 3,000 | 2,000 |
| 11 | LSCS in First Referral Hospitals | Gynaecologist - 1,500 ; Anaesthetist-1,000 ; Paediatrician-500 | Gynaecologist- 3,000 ; Anaesthetist-2,000 ; Paediatrician-500 | Gynaecologist- 2,500 ; Anaesthetist- 1,500 ; Paediatrician- 500 |
| | Orthopaedic Surgeries | | | |
| 1 | Dislocation of Joints<br>a. Closed Reduction | 500 | 1,500 | 1,000 |
| | b. Open Reduction | 4,000 | 5,000 | 4,000 |
| 2 | Haemorthorosis | 500 | 1,000 | 750 |
| 3 | Ligament Tear | 2,500 | 3,000 | 2,500 |
| 4 | Fracture neck & Femor | 4,000 | 5,000 | 4,000 |
| 5 | Fracture of Long Bones-close reduction | 500 | 2,000 | 1,500 |
| | Open reduction | 3,000 | 5,000 | 4,000 |

| | | | | |
|---|---|---|---|---|
| 6 | Tapping with Inter costal drainage | 500 | 2,000 | 1,500 |
| 7 | Intubations to remove foreign body in respiratory tract | 1,000 | 3,000 | 2,000 |
| 8 | Head Injury management | 1,000 | 2,000 | 1,500 |
| 9 | Fracture rib Haemothorax | 500 | 2,000 | 1,500 |
| 10 | Compound Fracture | | 5,000 | 4,500 |
| 11 | Compartment Syndrome | | 4,000 | 3,000 |
| 12 | Crush Injuries | | 4,000 | 3,000 |
| | Anaesthesia | | | |
| 1 | General Anaesthesia | 1,250 | 3,000 | 1,750 |
| 2 | Spinal/Epidural Anaesthesia | 1,000 | 2,000 | 1,500 |
| 3 | Nerve Block (in case the procedure is not completed under local anaesthesia, the procedure can be done under general anaesthesia and the rates claimed for general anaesthesia only) | 500 | 1,500 | 1,000 |

The total remuneration for a month for the Specialists procured on retention fee basis shall not exceed the amount of monthly remuneration fixed for the respective Specialists to be procured on contract basis.

By Order and in the name of the Governor of Karnataka,

**(M. Shashidhar)**

Deputy Secretary to Government, KHSDRP

P.R.2115

Health and Family Welfare Department.

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ** : ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ 2010-11ನೇ ಸಾಲಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ : ಡಿಎಎಂ : ಎಸಿಟಿ : 1 :18 : 2010-11, ದಿನಾಂಕ : 23-06-2010.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 23-06-2010ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರು 2009-10ನೇ ಸಾಲಿನಲ್ಲಿ ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಹೆಚ್ಚುವರಿಯಾಗಿ ಮಂಜೂರಾದ ಹುದ್ದೆಗಳಿಗೆ ವೇತನ ಹಾಗೂ ಭತ್ಯೆಗಳನ್ನು ಪಾವತಿಸಲು ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 158 ಕೆಎಂಯು 2009, ದಿನಾಂಕ 02-02-2010 ರಲ್ಲಿ ರೂ. 25.00 ಲಕ್ಷಗಳನ್ನು ಪೇಯಿಸ್ ರಸೀತಿ ಮೂಲಕ ಬಿಡುಗಡೆ ಮಾಡಲಾಗಿದ್ದು, ಅದಕ್ಕೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿರುವುದರಿಂದ 2010-11ನೇ ಸಾಲಿಗೆ ನಿಗದಿ ಪಡಿಸಲಾದ ಅನುದಾನ ರೂ. 25.00 ಲಕ್ಷಗಳನ್ನು ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಹೆಚ್ಚುವರಿಯಾಗಿ ಮಂಜೂರಾದ ಹುದ್ದೆಗಳಿಗೆ ವೇತನ ಹಾಗೂ ಭತ್ಯೆಗಳನ್ನು ಪಾವತಿಸಲು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ :-

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 137 ಕೆಎಂಯು 2010, ಬೆಂಗಳೂರು, ದಿನಾಂಕ: 05.08.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2010-11ನೇ ಸಾಲಿಗೆ ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಹೆಚ್ಚುವರಿಯಾಗಿ ಮಂಜೂರಾದ ಹುದ್ದೆಗಳಿಗೆ ವೇತನ ಹಾಗೂ ಭತ್ಯೆಗಳನ್ನು ಪಾವತಿಸಲು ನಿಗದಿಪಡಿಸಲಾದ ಅನುದಾನ ರೂ. 25.00 ಲಕ್ಷಗಳಲ್ಲಿ ಮೊದಲನೇ ಕಂತಾಗಿ ರೂ. 12.50 ಲಕ್ಷ (ರೂ. ಹನ್ನೆರಡು ಲಕ್ಷ ಐವತ್ತು ಸಾವಿರಗಳು ಮಾತ್ರ) ಗಳನ್ನು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರಿಗೆ ಬಿಡುಗಡೆ ಮಾಡಿ ಆದೇಶಿಸಿದೆ.

ಈ ವೆಚ್ಚವನ್ನು 2010-11ನೇ ಸಾಲಿನ ಲೆಕ್ಕಶೀರ್ಷಿಕೆ 2205-00-103-0-18 (ಯೋಜನೆ) 101 ಸಹಾಯಾನುದಾನ ಅಡಿಯಲ್ಲಿ ಭರಿಸತಕ್ಕದ್ದು ಹಾಗು ಬಿಡುಗಡೆಗೊಳಿಸಿದ ಅನುದಾನಕ್ಕೆ ಹಣ ಬಳಕೆ ಪ್ರಮಾಣ ಪತ್ರವನ್ನು ಒದಗಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ದಿನಾಂಕ 19-07-2010ರ ಟಿಪ್ಪಣಿ ಸಂಖ್ಯೆ ಶಿಇ 1347 ಐಎಫ್ (ಬಿ&ಎ) 2010 ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2164

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ.

(ಆಡಳಿತ ಕನ್ನಡ)

## ಒಳಾಡಳಿತ ಸಚಿವಾಲಯ

**ವಿಷಯ** : ವಿರಾಜಪೇಟೆಯ ಅಧಿಕ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಹುದ್ದೆಗಳನ್ನು ಪೊನ್ನಂಪೇಟೆಯ ಸಿ.ಜೆ. (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರದ ಆದೇಶ ಸಂಖ್ಯೆ : ಲಾ 82 ಪಿಪಿಇ 84, ದಿನಾಂಕ : 30–10–1984.
2. ಸರ್ಕಾರದ ಆದೇಶ ಸಂಖ್ಯೆ : ಒಇ 549 ಪಿಪಿಇ 2006, ದಿನಾಂಕ : 09–03–2007.
3. ಸರ್ಕಾರದ ಆದೇಶ ಸಂಖ್ಯೆ : ಲಾ 12 ಎಲ್‌ಸಿಇ 2010, ದಿನಾಂಕ : 11–01–2010.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯವರ ಪತ್ರದ ಸಂಖ್ಯೆ : ಡಿಪಿಎನ್/ಸಿಶಾ1(ಎ)/57/2009–10, ದಿನಾಂಕ : 02–02–2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ : 30–10–1984ರ ಸರ್ಕಾರದ ಆದೇಶದನ್ವಯ ವಿರಾಜಪೇಟೆಯ ಅಧಿಕ ಸಿ.ಜೆ. (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಒಂದು ಸಹಾಯಕ ಸರ್ಕಾರಿ ಅಭಿಯೋಜಕರ, ಒಂದು ಬೆರಳಚ್ಚುಗಾರ–ವ–ಸಹಾಯಕರ ಹಾಗೂ ಒಂದು ದಲಾಯತರ ಹುದ್ದೆಯನ್ನು ಸೃಜಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ : 09–03–2007ರ ಸರ್ಕಾರದ ಆದೇಶದನ್ವಯ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಸೃಜಿಸಲಾಗಿದ್ದ, ಒಂದು ಬೆರಳಚ್ಚುಗಾರರ–ವ–ಸಹಾಯಕರ ಹುದ್ದೆಯನ್ನು ರದ್ದುಪಡಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ : 11–01–2010ರ ಸರ್ಕಾರದ ಆದೇಶದನ್ವಯ ವಿರಾಜಪೇಟೆಯ ಅಧಿಕ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯವನ್ನು ಪೊನ್ನಂಪೇಟೆಗೆ ಸ್ಥಳಾಂತರಿಸಲಾಗಿದೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ : 02–02–2010ರ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಪತ್ರದಲ್ಲಿ ಮೇಲೆ (1) ರಿಂದ (3)ರಲ್ಲಿ ಓದಲಾದ ಸರ್ಕಾರದ ಆದೇಶಗಳ ಹಿನ್ನೆಲೆಯಲ್ಲಿ, ವಿರಾಜಪೇಟೆಯ ಅಧಿಕ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯವು ಸ್ಥಳಾಂತರಗೊಂಡಿರುವನ್ವಯ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರು ಮತ್ತು ದಲಾಯತ್‌ರವರ ಹುದ್ದೆಯನ್ನು ಪೊನ್ನಂಪೇಟೆಗೆ ಸ್ಥಳಾಂತರಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 41 ಪಿಪಿಇ 2010, ಬೆಂಗಳೂರು, ದಿನಾಂಕ: 10.08.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ವಿರಾಜಪೇಟೆಯ ಅಧಿಕ ಸಿ.ಜೆ. (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಹೊಂದಿಕೊಂಡಿರುವ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಒಂದು ಸಹಾಯಕ ಸರ್ಕಾರಿ ಅಭಿಯೋಜಕರ ಹಾಗೂ ಒಂದು ದಲಾಯತರ ಹುದ್ದೆಯನ್ನು ಪೊನ್ನಂಪೇಟೆಯ ಸಿ.ಜೆ. (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ ಇಲ್ಲಿಗೆ ಸ್ಥಳಾಂತರಿಸಿದೆ. ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಸಿ 96, ದಿನಾಂಕ : 10–07–1996ರ ಐಟಂ (53)ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2165

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ** : ಡಾ: ಜಗದೀಶ್ ದಾಳೇರ, ಪಶುವೈದ್ಯಾಧಿಕಾರಿ, ಪಶುಚಿಕಿತ್ಸಾಲಯ, ಬನವಾಸಿ, ಶಿರಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇವರನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕುವ (Discharge) ಬಗ್ಗೆ.

**ಓದಲಾಗಿದೆ** : ಪತ್ರ ಸಂಖ್ಯೆ : ಆಪಸಂ/ಸಿಬ್ಬಂದಿ–2/ವಿವ–12/07–08, ದಿನಾಂಕ : 17–07–2010.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಡಾ: ಜಗದೀಶ್ ದಾಳೇರ ಅಧಿಸೂಚನೆ ಸಂಖ್ಯೆ : ಪಸಂಮೀ 46 ಪಸಸೇ 2006, ದಿನಾಂಕ : 02–05–2006ರನ್ವಯ ಪಶುವೈದ್ಯಾಧಿಕಾರಿ ಹುದ್ದೆಗೆ ನೇಮಕಾತಿ ಹೊಂದಿದ್ದು, ಅವರನ್ನು ಪಶುಚಿಕಿತ್ಸಾಲಯ, ಬನವಾಸಿ, ಶಿರಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇಲ್ಲಿಗೆ ನಿಯುಕ್ತಿಗೊಳಿಸಲಾಗಿತ್ತೆಂದು ತಿಳಿಸಿರುತ್ತಾರೆ. ಸದರಿ ಅಧಿಕಾರಿಯು ದಿನಾಂಕ : 11–05–2006ರಂದು ಕರ್ತವ್ಯಕ್ಕೆ ಹಾಜರಾಗಿ ದಿನಾಂಕ : 05–08–2006ರವರೆಗೆ ಕರ್ತವ್ಯ ನಿರ್ವಹಿಸಿರುತ್ತಾರೆಂದು, ತದನಂತರ ದಿನಾಂಕ : 06–08–2006 ರಿಂದ ಸತತವಾಗಿ 42 ತಿಂಗಳಿಗೂ ಮೀರಿ ಸರ್ಕಾರಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿದ್ದು, ಈ ಸಂಬಂಧ ಅನೇಕ ಬಾರಿ ಸಂಬಂಧಪಟ್ಟ ಪಶುವೈದ್ಯಾಧಿಕಾರಿಗೆ ಪತ್ರ ವ್ಯವಹರಿಸಿದರೂ ಯಾವುದೇ ಪತ್ರಗಳು ಸ್ವೀಕೃತಗೊಂಡಿರುವುದಿಲ್ಲವೆಂದು ಹಾಗೂ ಅವರಿಂದ ಯಾವುದೇ ಮಾಹಿತಿ ಬಂದಿರುವುದಿಲ್ಲವೆಂದು ತಿಳಿಸಿರುತ್ತಾರೆ. ಡಾ: ಜಗದೇಶ್ ದಾಳೇರರವರು ದಿನಾಂಕ : 11–05–2006ರಂದು ಕರ್ತವ್ಯಕ್ಕೆ ಹಾಜರಾಗಿ ದಿನಾಂಕ : 05–08–2006 ರವರೆಗೆ 3 ತಿಂಗಳು ಮಾತ್ರ ಕರ್ತವ್ಯ ನಿರ್ವಹಿಸಿ ಖಾಯಂ ಪೂರ್ವ ಸೇವಾವಧಿಯಲ್ಲಿ ದೀರ್ಘಕಾಲದಿಂದ ಅನಧಿಕೃತ

ಗೈರುಹಾಜರಾಗಿರುವುದರಿಂದ ಉಪನಿರ್ದೇಶಕರು, ಪಶುಪಾಲನಾ ಇಲಾಖೆ, ಕಾರವಾರ ಇವರ ಶಿಫಾರಸ್ಸಿನಂತೆ ಸದರಿ ಅಧಿಕಾರಿಯನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು, 1977ರ ನಿಯಮ 6(1)ರನ್ವಯ ಸರ್ಕಾರಿ ಸೇವೆಯಿಂದ ವಜಾಗೊಳಿಸುವಂತೆ ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು ಡಾ: ಜಗದೀಶ್ ದಾಳೇರ, ಪಶುವೈದ್ಯಾಧಿಕಾರಿ ಇವರು ದಿನಾಂಕ : 11-05-2006 ರಂದು ಸರ್ಕಾರಿ ಸೇವೆಯಲ್ಲಿ ಹಾಜರಾಗಿ ದಿನಾಂಕ : 05-08-2006 ರವರೆಗೆ ಅಂದರೆ 3 ತಿಂಗಳು ಮಾತ್ರ ಕರ್ತವ್ಯ ನಿರ್ವಹಿಸಿದ್ದು ದಿನಾಂಕ : 06-08-2006 ರಿಂದ ಅನಧಿಕೃತವಾಗಿ ಗೈರುಹಾಜರಾಗಿ ಕಛೇರಿಯ ದೈನಂದಿನ ಕಾರ್ಯಚಟುವಟಿಕೆಗಳಿಗೆ ತೊಂದರೆ ಉಂಟು ಮಾಡಿರುತ್ತಾರೆ. ಕರ್ತವ್ಯಕ್ಕೆ ಹಾಜರಾಗುವಂತೆ ಅನೇಕ ಬಾರಿ ಉಪನಿರ್ದೇಶಕರು, ಪಶುಪಾಲನಾ ಇಲಾಖೆ, ಕಾರವಾರ, ಉತ್ತರ ಕನ್ನಡ ಜಿಲ್ಲೆ ಇವರು ನೋಟೀಸ್ ಜಾರಿ ಮಾಡಿದ್ದರೂ ನೋಟೀಸಿಗೆ ಸ್ಪಂದಿಸಿರುವುದಿಲ್ಲ ಮತ್ತು ಕರ್ತವ್ಯಕ್ಕೂ ಹಾಜರಾಗಿರುವುದಿಲ್ಲ. ಈ ರೀತಿ ಪರೀಕ್ಷಾರ್ಥ ಅವಧಿಯಲ್ಲಿರುವಾಗಲೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯ ಲೋಪವೆಸಗಿರುವುದರ ಜೊತೆಗೆ ದುರ್ವತನೆ ತೋರಿರುತ್ತಾರೆ. ಇದರಿಂದಾಗಿ ಸದರಿಯವರಿಗೆ ಸರ್ಕಾರಿ ಸೇವೆಯಲ್ಲಿ ಕಾರ್ಯನಿರ್ವಹಿಸಲು/ಮುಂದುವರೆಯಲು ಆಸಕ್ತಿ ಇಲ್ಲದಿರುವುದು ಕಂಡುಬರುತ್ತದೆ. ಈ ಎಲ್ಲಾ ಅಂಶಗಳನ್ನು ಗಂಭೀರವಾಗಿ ಪರಿಗಣಿಸಿದ ಸರ್ಕಾರ ಇಲಾಖಾ ಆಯುಕ್ತರ ಶಿಫಾರಸ್ಸಿನಂತೆ ಡಾ: ಜಗದೀಶ್ ದಾಳೇರ, ಇವರನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕುವುದು (ಆಭಿಚಿಡಿಂಜ) ಸೂಕ್ತ ಎಂದು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಪಸಂಮೀ 330 ಪಸಸೇ 2010, ಬೆಂಗಳೂರು, ದಿನಾಂಕ: 12.08.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ: ಜಗದೀಶ್ ದಾಳೇರ, ಪಶುವೈದ್ಯಾಧಿಕಾರಿ, ಪಶುಚಿಕಿತ್ಸಾಲಯ, ಬನವಾಸಿ, ಶಿರಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇವರು ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಹಾಗೂ ಪರೀಕ್ಷಾರ್ಥ ಅವಧಿಯಲ್ಲಿ ದುರ್ವತನೆ ತೋರಿ ಕರ್ತವ್ಯಲೋಪ ಎಸಗಿರುವುದರಿಂದ, ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರ ಶಿಫಾರಸ್ಸಿನಂತೆ ಸದರಿ ಅಧಿಕಾರಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 6(1) ರನ್ವಯ ಸರ್ಕಾರಿ ಸೇವೆಯಿಂದ ತೆಗೆದುಹಾಕಿ (Discharge) ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2166

**ಎಂ.ಪಿ. ನಾಗರಾಜ**
ಪೀಠಾಧಿಕಾರಿ - 2
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಪಶುಸಂಗೋಪನೆ-ಎ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯು 125 ವರ್ಷ ಪೂರೈಸುತ್ತಿರುವ ಸಂದರ್ಭದಲ್ಲಿ ಪುರಾತತ್ವ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿರುವ ಪುರಾತತ್ವಜ್ಞರಿಗೆ "ಕರ್ನಾಟಕ ಪುರಾತತ್ವ ರತ್ನ" ಪ್ರಶಸ್ತಿ ಪ್ರದಾನ ಮಾಡುವ ಕುರಿತು – ಸಮಿತಿ ರಚನೆ ಬಗ್ಗೆ.

**ಓದಲಾಗಿದೆ** : ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರ ಪತ್ರ ಸಂಖ್ಯೆ : ಡಿಎಎಂ :ಅ.ಸ/ಸಮಿತಿ/2010-11 ದಿನಾಂಕ : 07-07-2010.

**ಪ್ರಸ್ತಾವನೆ:**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯು 125 ವರ್ಷಗಳನ್ನು ಪೂರೈಸುತ್ತಿರುವ ಸಂದರ್ಭದಲ್ಲಿ ಪುರಾತತ್ವ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿರುವ ಪುರಾತತ್ವಜ್ಞರಿಗೆ "ಕರ್ನಾಟಕ ಪುರಾತತ್ವ ರತ್ನ" ಪ್ರಶಸ್ತಿ ಪ್ರದಾನ ಮಾಡಲು ಉದ್ದೇಶಿಸಿದ್ದು, ಈ ಕಾರ್ಯಕ್ರಮಕ್ಕೆ 2010-11ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ರೂ. 6.50 ಲಕ್ಷ ಹಣವನ್ನು ನಿಗದಿಪಡಿಸಲಾಗಿದೆ. ಆದ್ದರಿಂದ ಸದರಿ ಪ್ರಶಸ್ತಿ ಪ್ರದಾನ ಮಾಡಲು ಪೂರ್ವಭಾವಿ ಸಿದ್ಧತೆಗಾಗಿ ಸಮಿತಿಯನ್ನು ರಚಿಸುವಂತೆ ಹಾಗೂ ಈ ಸಮಾರಂಭವನ್ನು ದಿನಾಂಕ : 08-10-2010 ರಂದು ನಡೆಯುವ ಜೈನಶಾಸ್ತ್ರ ಕುರಿತ ಅಂತರರಾಷ್ಟ್ರೀಯ ವಿಚಾರ ಸಂಕಿರಣದ ಸಂದರ್ಭದಲ್ಲಿ ನೀಡಲು ನಿರ್ಧರಿಸಿರುವುದಾಗಿ, ಮೇಲೆ ಓದಲಾದ ದಿನಾಂಕ : 07-07-2010ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆರವರು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದೆ ಅದರಂತೆ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ ಕಸಂವಾಪ್ರ 144 ಕೆಎಂಯು 2010, ಬೆಂಗಳೂರು, ದಿನಾಂಕ: 09.08.2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯು 125 ವರ್ಷ ಪೂರೈಸುತ್ತಿರುವ ಸಂದರ್ಭದಲ್ಲಿ ಪುರಾತತ್ವ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿರುವ ಪುರಾತತ್ವಜ್ಞರಿಗೆ "ಕರ್ನಾಟಕ ಪುರಾತತ್ವ ರತ್ನ" ಪ್ರಶಸ್ತಿ ಪ್ರದಾನ ಮಾಡಲು ಹಾಗೂ ಪೂರ್ವಭಾವಿ ಸಿದ್ಧತೆಗಾಗಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಿದೆ ಮಂಜೂರಾತಿ ನೀಡಿದೆ.

| ಕ್ರ.ಸಂ. | ಸಮಿತಿ | ಪದನಾಮ |
|---|---|---|
| 1. | ಡಾ: ಎಂ.ವಿ. ಕೃಷ್ಣಪ್ಪ<br>ಅಧ್ಯಕ್ಷರು, ಮತ್ತು ಪ್ರಾಧ್ಯಾಪಕರು<br>ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ<br>ಮೈಸೂರು ವಿಶ್ವವಿದ್ಯಾಲಯ, ಮೈಸೂರು. | ಅಧ್ಯಕ್ಷರು |
| 2. | ಡಾ: ಎಸ್.ವಿ. ಪಾಡೀಗಾರ್<br>ಅಧ್ಯಕ್ಷರು ಮತ್ತು ಪ್ರಾಧ್ಯಾಪಕರು<br>ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನ ಶಾಸ್ತ್ರ ವಿಭಾಗ<br>ಕರ್ನಾಟಕ ವಿಶ್ವವಿದ್ಯಾನಿಲಯ ಧಾರವಾಡ. | ಸದಸ್ಯರು |

| | | |
|---|---|---|
| 3. | ಡಾ: ಆರ್.ಎಂ. ಷಡಕ್ಷರಯ್ಯ<br>ನಿರ್ದೇಶಕರು<br>ಕನ್ನಡ ಸಂಶೋಧನಾ ಸಂಸ್ಥೆ<br>ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ | ಸದಸ್ಯರು |
| 4. | ನಿರ್ದೇಶಕರು<br>ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ<br>ಮೈಸೂರು. | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ. 2167

**ಎಂ.ಕೆ.ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ** : ವಿಶ್ವ ಬ್ಯಾಂಕ್ ನೆರವಿನ ಕೇಂದ್ರ ಸರ್ಕಾರದ ಭಾರತ ಸಾಂಖ್ಯಿಕ ಬಲವರ್ಧನಾ ಯೋಜನೆಯನ್ನು ಅನುಷ್ಠಾನಗೊಳಿಸಲು ಸ್ಥಾಪಿಸಲಾಗಿರುವ ಕರ್ನಾಟಕ ಸಾಂಖ್ಯಿಕ ವ್ಯವಸ್ಥೆ ಅಭಿವೃದ್ಧಿ ಸಂಸ್ಥೆಗೆ (Karnataka Statistical System Development Agency) ಅಗತ್ಯವಿರುವ ಸೌಲಭ್ಯಗಳನ್ನು ಒದಗಿಸಲು ಹಾಗೂ ಹುದ್ದೆಗಳನ್ನು ಸೃಜಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ** :
1. ಸರ್ಕಾರದ ಆದೇಶ ಸಂಖ್ಯೆ : ಪಿಡಿ 64 ಎಸ್‌ಎಂಸಿ 2008 ದಿನಾಂಕ 25–03–2009.
2. ಸರ್ಕಾರದ ಅಧಿಸೂಚನೆ ಸಂಖ್ಯೆ : ಪಿಡಿ 110 ಎಸ್‌ಎಂಸಿ 2009 ದಿನಾಂಕ 26–05–2009.
3. ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ : ಆಸಾಂನಿ. 01/ಕೆಎಸ್‌ಎಸ್‌ಡಿಎ/2009 ದಿನಾಂಕ 13–01–2010.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ, ವಿಶ್ವ ಬ್ಯಾಂಕ್ ನೆರವಿನೊಂದಿಗೆ ಕೇಂದ್ರ ಸರ್ಕಾರದ ಭಾರತ ಸಾಂಖ್ಯಿಕ ಬಲವರ್ಧನಾ ಯೋಜನೆಯನ್ನು ಅನುಷ್ಠಾನಗೊಳಿಸಲು ಕರ್ನಾಟಕ ಸಾಂಖ್ಯಿಕ ವ್ಯವಸ್ಥೆ ಅಭಿವೃದ್ಧಿ ಸಂಸ್ಥೆಯನ್ನು (Karnataka Statistical System Development Agency) ಸ್ಥಾಪಿಸಲಾಗಿದೆ. ಮುಂದುವರೆದು, ಸದರಿ ಸಂಸ್ಥೆಯನ್ನು ಕರ್ನಾಟಕ ಸಂಘಗಳ ನೋಂದಣಿ ನಿಯಮ 1960ರ ಪ್ರಕಾರ ದಿನಾಂಕ : 20–04–2009 ರಂದು ನೋಂದಾಯಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀ ಬಿ.ಎಸ್. ಹಿರೇಮಠ್, ಜಂಟಿ ನಿರ್ದೇಶಕರು, ಕೇಂದ್ರ ಕಛೇರಿ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಇವರನ್ನು ಕರ್ನಾಟಕ ಸಾಂಖ್ಯಿಕ ವ್ಯವಸ್ಥೆ ಅಭಿವೃದ್ಧಿ ಸಂಸ್ಥೆಯ (Karnataka Statistical System Development Agency) ಯೋಜನಾ ನಿರ್ದೇಶಕರ (Project Director) ಹುದ್ದೆಯು ಸೃಜನೆಯಾಗುವ ತನಕ ಅಥವಾ ಸೃಜನೆಯಾದ ಹುದ್ದೆಯನ್ನು ಭರ್ತಿ ಮಾಡುವ ತನಕ ಸದರಿ ಸಂಸ್ಥೆಯ ಪ್ರಾರಂಭಿಕ ಹಾಗೂ ಅವಶ್ಯಕ ಕಾರ್ಯಚಟುವಟಿಕೆಗಳನ್ನು ನಿರ್ವಹಿಸಲು ಯೋಜನಾ ನಿರ್ದೇಶಕರ ಕಾರ್ಯಭಾರವನ್ನು ಯಾವುದೇ ಆರ್ಥಿಕ ಸೌಲಭ್ಯವಿಲ್ಲದೆ ಹೆಚ್ಚುವರಿಯಾಗಿ ವಹಿಸಿಕೊಳ್ಳಲು ಆದೇಶಿಸಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು ಇವರು ದಿನಾಂಕ 02–12–2009 ರಂದು ನಡೆದ ಕರ್ನಾಟಕ ಸಾಂಖ್ಯಿಕ ವ್ಯವಸ್ಥೆ ಅಭಿವೃದ್ಧಿ ಸಂಸ್ಥೆಯ ಪ್ರಥಮ ಸಭೆಯಲ್ಲಿ ಸದರಿ ಸಂಸ್ಥೆಗೆ ಅಗತ್ಯವಿರುವ ಹುದ್ದೆಗಳನ್ನು ಸೃಜಿಸಲು ಅನುಮೋದನೆಯನ್ನು ನೀಡಲಾಗಿದೆಯೆಂದು ತಿಳಿಸಿ ಅದರಂತೆಯೆ ಕೆಳಕಂಡ ಹುದ್ದೆಗಳ ಸೃಜನೆಗೆ ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ.

| ಕ್ರ. ಸಂ. | ಹುದ್ದೆಯ ವಿವರ | ಸೃಜಿಸ ಬೇಕಾದ ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ ರೂ. | ವಾರ್ಷಿಕ ಅಂದಾಜು ವೆಚ್ಚ ರೂ. ಲಕ್ಷಗಳಲ್ಲಿ | ನೇಮಕಾತಿ ವಿಧಾನ |
|---|---|---|---|---|---|
| 1. | ಯೋಜನಾ ನಿರ್ದೇಶಕರು | 1 | 22125–30300 | 4.20 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದಿಂದ ನಿಯೋಜನೆಯ ಮೇರೆಗೆ |
| 2. | ಉಪ ನಿರ್ದೇಶಕರು | 1 | 18150–26925 | 3.48 | |
| 3. | ಸಹಾಯಕ ಸಾಂಖ್ಯಿಕ ಅಧಿಕಾರಿ | 2 | 10000–18150 | 4.08 | |
| 4. | ಅಧೀಕ್ಷಕರು | 1 | 10000–18150 | 2.04 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದಿಂದ ನಿಯೋಜನೆ/ಹೊರಗುತ್ತಿಗೆ ಆಧಾರದ ಮೇರೆಗೆ |
| 5. | ಪ್ರಥಮ ದರ್ಜೆ ಸಹಾಯಕರು | 1 | 7275–13350 | 1.44 | |
| 6. | ಶೀಘ್ರಲಿಪಿಗಾರರು/ಬೆರಳಚ್ಚುಗಾರರು ಕಮ್ ಕಿರಿಯ ಸಹಾಯಕರು /ಗಣಕಯಂತ್ರ ನಿರ್ವಾಹಕರು | 2 | 7275–13350 (+ವಿ.ವೇ.) | 2.88 | |

| | | | | | |
|---|---|---|---|---|---|
| 7. | ಸಮೂಹ 'ಡಿ' ನೌಕರರು | 2 | 4800–7275 | 1.80 | |
| 8. | ಗುತ್ತಿಗೆ ಆಧಾರಿತ ವಾಹನ (1) | | | 2.40 | |
| 9. | ಕಛೇರಿ ವೆಚ್ಚ | | | 8.00 | |
| | **ಒಟ್ಟು** | **10** | | **30.32** | |

ಮುಂದುವರೆದು, ಮೇಲ್ಕಾಣಿಸಿದ ಹುದ್ದೆಗಳ ಸೃಜನೆಯೊಂದಿಗೆ ಸದರಿ ಸಂಸ್ಥೆಯ ನಿರ್ವಹಣೆಗಾಗಿ ಕೆಳಕಂಡ ಸೌಲಭ್ಯಗಳ ಅಗತ್ಯತೆ ಇರುವುದಾಗಿ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶಕರು ತಮ್ಮ ಪ್ರಸ್ತಾವನೆಯಲ್ಲಿ ತಿಳಿಸಿರುತ್ತಾರೆ.

| ಕ್ರ.ಸಂ. | ವಿವರ | ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1. | ಕರ್ನಾಟಕ ಸಾಂಖ್ಯಿಕ ವ್ಯವಸ್ಥೆ ಅಭಿವೃದ್ಧಿ ಸಂಸ್ಥೆಯ ಕಛೇರಿ ಬಾಡಿಗೆಗಾಗಿ (ರೂ. 3.5 ಲಕ್ಷ X 5 ವರ್ಷಗಳು) | 17.50 |
| 2. | ಪೀಠೋಪಕರಣ | 10.00 |
| 3. | ಗಣಕಯಂತ್ರಗಳು (4), ಬಹು ಉಪಯೋಗಿತ ಮುದ್ರಣ ಯಂತ್ರಗಳು (2), ಐಂಓ ಅಂತರ್‌ಜಾಲ ತಾಣ (Internet) ಟೆಲಿಫೋನ್ | 8.00 |
| | **ಒಟ್ಟು** | **35.50** |

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಅದರಂತೆಯೆ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಪಿಡಿ 64 ಎಸ್‌ಎಂಸಿ 2008, ಬೆಂಗಳೂರು, ದಿನಾಂಕ: 05.08.2010**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ವಿಶ್ವ ಬ್ಯಾಂಕ್ ನೆರವಿನ ಕೇಂದ್ರ ಸರ್ಕಾರದ ಭಾರತ ಸಾಂಖ್ಯಿಕ ಬಲವರ್ಧನಾ ಯೋಜನೆಯನ್ನು ಅನುಷ್ಠಾನಗೊಳಿಸಲು ಸ್ಥಾಪಿಸಲಾಗಿರುವ ಕರ್ನಾಟಕ ಸಾಂಖ್ಯಿಕ ವ್ಯವಸ್ಥೆ ಅಭಿವೃದ್ಧಿ ಸಂಸ್ಥೆಗೆ (Karnataka Statistical System Development Agency) ಅಗತ್ಯವಿರುವ ಕೆಳಕಂಡ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

| ಕ್ರ. ಸಂ. | ಹುದ್ದೆಯ ವಿವರ | ಸೃಜಿಸ ಬೇಕಾದ ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ ರೂ. | ವಾರ್ಷಿಕ ಅಂದಾಜು ವೆಚ್ಚ ರೂ. ಲಕ್ಷಗಳಲ್ಲಿ | ನೇಮಕಾತಿ ವಿಧಾನ |
|---|---|---|---|---|---|
| 1. | ಯೋಜನಾ ನಿರ್ದೇಶಕರು | 1 | 22125–30300 | 4.20 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದಿಂದ ನಿಯೋಜನೆಯ ಮೇರೆಗೆ |
| 2. | ಉಪ ನಿರ್ದೇಶಕರು | 1 | 18150–26925 | 3.48 | |
| 3. | ಸಹಾಯಕ ಸಾಂಖ್ಯಿಕ ಅಧಿಕಾರಿ | 2 | 10000–18150 | 4.08 | |
| 4. | ಅಧೀಕ್ಷಕರು | 1 | 10000–18150 | 2.04 | ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದಿಂದ ನಿಯೋಜನೆ/ಹೊರಗುತ್ತಿಗೆ ಆಧಾರದ ಮೇರೆಗೆ |
| 5. | ಪ್ರಥಮ ದರ್ಜೆ ಸಹಾಯಕರು | 1 | 7275–13350 | 1.44 | |
| 6. | ಶೀಘ್ರಲಿಪಿಗಾರರು/ಬೆರಳಚ್ಚುಗಾರರು ಕಮ್ ಕಿರಿಯ ಸಹಾಯಕರು /ಗಣಕಯಂತ್ರ ನಿರ್ವಾಹಕರು | 2 | 7275–13350 (+ವಿ.ವೇ.) | 2.88 | |
| 7. | ಸಮೂಹ 'ಡಿ' ನೌಕರರು | 2 | 4800–7275 | 1.80 | |
| 8. | ಗುತ್ತಿಗೆ ಆಧಾರಿತ ವಾಹನ (1) | | | 2.40 | |
| 9. | ಕಛೇರಿ ವೆಚ್ಚ | | | 8.00 | |
| | **ಒಟ್ಟು** | **10** | | **30.32** | |

ಮುಂದುವರೆದು, ಸದರಿ ಸಂಸ್ಥೆಯ ನಿರ್ವಹಣೆಗಾಗಿ ಕೆಳಕಂಡ ಸೌಲಭ್ಯಗಳನ್ನು ಒದಗಿಸಲು ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

| ಕ್ರ.ಸಂ. | ವಿವರ | ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1. | ಕರ್ನಾಟಕ ಸಾಂಖ್ಯಿಕ ವ್ಯವಸ್ಥೆ ಅಭಿವೃದ್ಧಿ ಸಂಸ್ಥೆಯ ಕಛೇರಿ ಬಾಡಿಗೆಗಾಗಿ (ರೂ. 3.5 ಲಕ್ಷ X 5 ವರ್ಷಗಳು) | 17.50 |
| 2. | ಪೀಠೋಪಕರಣ | 10.00 |
| 3. | ಗಣಕಯಂತ್ರಗಳು (4), ಬಹು ಉಪಯೋಗಿತ ಮುದ್ರಣ ಯಂತ್ರಗಳು (2), ಐಂಓ ಅಂತರ್‌ಜಾಲ ತಾಣ (Internet) ಟೆಲಿಫೋನ್ | 8.00 |
| | **ಒಟ್ಟು** | **35.50** |

ಮೇಲ್ಕಾಣಿಸಿದ ಹುದ್ದೆಗಳ ಸೃಜನೆಯಿಂದಾಗಿ ತಗಲುವ ವೆಚ್ಚವನ್ನು ಹಾಗೂ ಸಂಸ್ಥೆಯ ನಿರ್ವಹಣೆಗಾಗಿ ಒದಗಿಸಲಾಗುವ ಸೌಲಭ್ಯಗಳ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ 3454–02–204–0–18–059 – ಭಾರತ ಸಾಂಖ್ಯಿಕ ಬಲವರ್ಧನೆ ಯೋಜನೆಯಡಿ ಭರಿಸತಕ್ಕದ್ದು.

| Village Name | Taluk & District | Land Survey Number | Extent in land | Wind Turbine Generator location No. |
|---|---|---|---|---|
| Kyerihal | Gangavathi/Koppal | 17 | 2 Acres per WTG of capacity 1.5 MW each for 3 WTGs | KAL-18 KAL-19 KAL-20 |

1. M/s. KRBL Limited shall execute an agreement with Government within 45 (forty five) days from the date of issue of this Order.
2. **PPA** is assigned to GESCOM, GESCOM shall execute the PPA with M/s. KRBL Limited within a period of one month.
3. The Government reserves the right to Cancel/modify this Order

The other terms and conditions of the Government Order read at (1) above shall **IPSO FACTO** applicable.

By Order and in the name of the Governor of Karnataka

(**S. J. Sampath Kumar)**

Under Secretary to Government

Energy Department

P.R. 2219

## HEALTH AND FAMILY WELFARE SECRETARIAT

**Sub :-** Increase of bed strength from 225 to 275 at Government Ayurveda Medical College and Hospital, Bangalore.

**Read :-** 1. Ministry of Health & Family Welfare, Department of Ayush, Government of India Letter No. R. 17011/40/2009-EP dated 5-8-2010 Addressed to Principal, Government Ayurveda Medical College, Bangalore.

2. Letter No. Ayush/48/Bud (1)/2010-11, dated 5-8-2010

***

**Preamble:**

Government of India, Ministry of Health & Family Welfare Department of Ayush in its letter dated : 05-8-2010 addressed to Principal, Government Ayurveda Medical College and Hospital Bangalore and copied to Secretary, CCIM, New Delhi and stated therein that the Institute was visited by the CCIM, New Delhi on 11-1-2010 and 12-1-2010 to reassess the facilities available in the Institution for teaching and practical training in connection with the grant of permission to this college in BAMS & PG courses. After examining the facilities available in the Institution as per the relevant regulations and approved norms of the CCIM under the IMCC Act, it has been observed that this college is not fulfilling the basic eligibility conditions, out of three conditions; condition No. (ii) is as follows :

There are 250-bedded hospital as reported by the CCIM as against the requirement of 255 beds.

Further, it is also mentioned that hearing has been fixed on 9-8-2010 at 11 a.m. before the designated Hearing Committee in the Department of Ayush, New Delhi and opportunity is given to present the case with oral and written submissions along with the valid documents and records/proofs against the shortcomings as indicated above. It is also submitted that as to why the permission to take admissions in BAMS/PG courses under the first proviso to sub section 5 of Section 13 A of the IMCC Act for the year 2010-11 should not be denied to the College.

In view of the above facts, the Director, Ayush in the single file system dated 05-08-2010 has submitted a proposal and to state that there is an urgent need to increase the bed strength from 225 to 275 to provide clinical facilities to UG and PG students with an intention to give Ayurvedic Health Care facilities to the people of Bangalore region. Further it is also submitted that Government Ayurveda medical College and Hospital, Bangalore is conducting UG Course with an intake of 60 seats and PG Course with an intake of 40 seats and therefore clinical facilities should be given to such students and recommended the proposal for increase of present bed strength of the Hospital has to be enhanced from 225-275, if not, the college may face derecognization for conducting UG & PG Courses.

The proposal of the Director, Ayush is examined in detail and following is the Order

**Government Order No. HFW 228 PTD 2010, Bangalore, Dated : 07-08-2010**

In the view of the circumstances explained in the preamble and after considering the proposal of Director, Ayush sanction is hereby accorded to enhance the bed strength from 225 to 275 at Government Ayurvedic Medical College & Hospital, Bangalore.

By Order and in the name of the Governor of Karnataka

(**R. S. Itagi)**

Under Secretary to Government

Health and Family Welfare Department

P.R. 2220

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ** : 1) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇರ ಪತ್ರ ಸಂಖ್ಯೆ : ಲೋಕ್/ಐಎನ್‌ವಿಜಿ/ಎಲ್-52/ಸಿಆರ್-5/2009, ಹಾವೇರಿ, ದಿನಾಂಕ 07-07-2010.

2) ತನಿಖಾಧಿಕಾರಿಯ ವರದಿ ದಿನಾಂಕ 22-02-2010

3) ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಕರಣದ ಸಾರಾಂಶ :**

ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಇವರ ವಿರುದ್ಧ ಗುನ್ನೆ ಸಂ. 5/2009ರಲ್ಲಿ ಆರಕ್ಷಕ ನಿರೀಕ್ಷಕರು, ಹಾವೇರಿ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಪತ್ರ ದಿನಾಂಕ 28-1-08ರೊಡನೆ ಕಳುಹಿಸುತ್ತಾ, ಆಪಾದಿತನನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19(1)(ಬಿ) ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಉಲ್ಲೇಖ (1)ರ ಪತ್ರ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಶ್ರೀ ಶಾಂತಪ್ಪ ಫಕೀರಪ್ಪ ತಳವಾರ, ಸಾ: ಕೆಂಗಾಪುರ ಶಿಗ್ಗಾಂವ್, ಹಾವೇರಿ ಜಿಲ್ಲೆ ಇವರ ಫಿರ್ಯಾದಿ ದಿನಾಂಕ 24-11-2009.
2. ಪ್ರಥಮ ವರ್ತಮಾನ ವರದಿ ಹಾವೇರಿ ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ-5/2009
3. ಪ್ರಾಯೋಗಿಕ ಪಂಚನಾಮೆ ದಿನಾಂಕ 25-11-2009
4. ಟ್ರ್ಯಾಪ್ ಮಹಜರ್ ದಿನಾಂಕ 25-11-2009
5. ರಾಸಾಯನಿಕ ಪರೀಕ್ಷಣಾ ವರದಿ ಸಂಖ್ಯೆ : LYK/ACE/DWD/15:2009, ದಿನಾಂಕ 13-11-2007
6. ಕೃತ್ಯ ನಡೆದ ಸ್ಥಳದ ನಕಾಶೆ
7. ಸಾಕ್ಷಿಗಳ ಹೇಳಿಕೆಗಳು :
   1. ಶ್ರೀ ಶಾಂತಪ್ಪ ಫಕೀರಪ್ಪ ತಳವಾರ
   2. ಶ್ರೀ ರಮೇಶ ಶಂಕ್ರಪ್ಪ ಕನಕಪ್ಪನವರ
   3. ಶ್ರೀ ಪ್ರಭಾಕರ ಶಿವಪ್ಪ ಕುಂದೂರ
   4. ಶ್ರೀ ಸುನೀಲ್ ಆನಂದ ಅರಕೇರಿ
   5. ಶ್ರೀ ನಾಗರಾಜ ಎಸ್.
   6. ಶ್ರೀ ಶಾಂತಪ್ಪ ಹೆಗ್ಗಪ್ಪ ಬಾರ್ಕಿ
   7. ಶ್ರೀ ಗಂಗಾಧರ ರಾಮ್ ರಸಾಳ್ಕರ್
   8. ಶ್ರೀ ಬಿ. ಕಾಶೀನಾಥ
   9. ಶ್ರೀ ನಿಂಗಪ್ಪ ಗುಡ್ಡಪ್ಪ ಕನವಳ್ಳಿ
   10. ಶ್ರೀ ಉದಯ ಕುಮಾರ ಕೃಷ್ಣರಾವ್ ಕುಲಕರ್ಣಿ
   11. ಶ್ರೀ ಸಿದ್ದಪ್ಪ ಬಸಪ್ಪ ಬಸವನಾಯ್ಕರ
   12. ಶ್ರೀ ಎಂ. ವಿ. ಮಡಿವಾಳರ್
   13. ಶ್ರೀ ಎಸ್. ಎನ್. ಹಿರೇಮಠ
   14. ಶ್ರೀ ಕುಮಾರಸ್ವಾಮಿ ಎಂ. ಹಿರೇಮಠ
   15. ಶ್ರೀ ಎಂ. ಡಿ. ಹಿರೇಮಠ
8. ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ ಎಸ್.ಸಿ/ಎಸ್.ಟಿ.ಸಂ. 6/06, ಜಿಲ್ಲಾ ಸತ್ರ ನ್ಯಾಯಾಲಯ, ಹಾವೇರಿ ಇಲ್ಲಿ ಸಾಕ್ಷಿಗಳಿಗೆ ಸೂಕ್ತ ತಿಳುವಳಿಕೆ ನೀಡಿ ಸಮರ್ಥವಾಗಿ ಕೇಸನ್ನು ನ್ಯಾಯಾಲಯದ ಮುಂದೆ ಮಂಡಿಸಲು ಫಿರ್ಯಾದುದಾರರಿಂದ ಲಂಚ ಕೇಳಿದ್ದಕ್ಕೆ ಸಂಬಂಧಿಸಿರುತ್ತದೆ.
9. ಆಪಾದಿತರ ಸಮಜಾಯಿಷಿ ಹೇಳಿಕೆಗಳು
10. ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಇವರ ಸ್ವಖುಷಿ ಹೇಳಿಕೆ

ತನಿಖಾಧಿಕಾರಿ ಶ್ರೀ ಜೆ. ಗುರುದತ್, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ ಪೊಲೀಸ್ ವಿಭಾಗ, ಹಾವೇರಿ ಇವರು, ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಇವರ ವಿರುದ್ಧ ದಂಡನಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಹಾವೇರಿ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ 5/2009ರಲ್ಲಿ ಲಂಚ ನಿರೋಧಕ ಕಾಯ್ದೆ-1988ರ ಕಲಮ್ 7,13(1)ಡಿ ಸಹ ಕಲಂ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಇವರು ಫಿರ್ಯಾದಿ ಶ್ರೀ ಶಾಂತಪ್ಪ ಫಕ್ಕೀರಪ್ಪ ತಳವಾರ, ಕೆಂಗಾಪುರ ಗ್ರಾಮ, ಶಿಗ್ಗಾಂವ್, ಹಾವೇರಿ ಜಿಲ್ಲೆ ಇವರ ಫಿರ್ಯಾದಿ ದಿನಾಂಕ 24-11-2009, ಎಸ್.ಸಿ./ಎಸ್.ಟಿ.ಸಂ. 6/06, ಜಿಲ್ಲಾ ಸತ್ರ ನ್ಯಾಯಾಲಯ, ಹಾವೇರಿ ಇವರ ಸರ್ಕಾರಿ ಕೆಲಸವನ್ನು ಮಾಡಲು ರೂ. 1,500/-ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸಾರ್ವಜನಿಕ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ 25-11-09ರಂದು ಸರ್ಕಾರಿ ಅಭಿಯೋಜಕರ ಕಚೇರಿಯಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಇವರು ಅಕ್ರಮ ಸಂಭಾವನೆಯಾದ 1,500/- ರೂ.ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ ಆಪಾದಿತ ಸಾರ್ವಜನಿಕ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಪ್ತಿಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸಾರ್ವಜನಿಕ ಅಧಿಕಾರಿಯ ನಡುವಿನ ವ್ಯವಹಾರವನ್ನು ಗಮನಿಸುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ ಅಕ್ರಮ ಸಂಭಾವನೆಯಾದ ರೂ. 1,500/-ಗಳನ್ನು ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು (ಹಣ ಪಡೆದ ವ್ಯಕ್ತಿ) ಇವರಿಂದ ಆಪಾದಿತರ ಕಛೇರಿಯಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದ್ದು, ಲೋಕಾಯುಕ್ತ ಅಧಿಕಾರಿಗಳು ಒದಗಿಸಿರುವ ಎಲ್ಲಾ ದಾಖಲೆಗಳನ್ನು ಸಾಕ್ಷ್ಯಗಳ ಹೇಳಿಕೆಗಳನ್ನು ಸಂದರ್ಭಗಳನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ಆರೋಪಿತ ಸರ್ಕಾರಿ ಅಧಿಕಾರಿಯು ಫಿರ್ಯಾದುದಾರರಿಂದ ಲಂಚ ಹಣ ರೂ. 1,500/- ಗಳನ್ನು ಸ್ವೀಕರಿಸಿರುವುದು ದೃಢಪಡುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ-1988ರ ಕಲಂ 7,13(1)ಡಿರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಸರ್ಕಾರಕ್ಕೆ ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ-1988ರ ಅನ್ವಯ ಕಲಂ 7,13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ತೆಗೆದುಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ-1988ರ ಕಲಂ 19(1)(ಬಿ)ರ ರಡಿ ಆಪಾದಿತ ಸಾರ್ವಜನಿಕ ಅಧಿಕಾರಿಯಾದ ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು ಇವರನ್ನು ಕಲಂ 7 ಮತ್ತು 13(ಡಿ) ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 231 ಪಿಪಿಇ 2010, ದಿನಾಂಕ: 17-08-2010**

ಲಂಚ ನಿರೋಧ ಕಾಯ್ದೆ 1988ರ ಕಲಂ 19(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಶ್ರೀ ಪ್ರಕಾಶ ಯಲ್ಲಪ್ಪ ಜಾಲಗಾರ, ಸರ್ಕಾರಿ ಅಭಿಯೋಜಕರು, ಜಿಲ್ಲಾ ಸತ್ರ ನ್ಯಾಯಾಲಯ, ಹಾವೇರಿ ಇವರ ವಿರುದ್ಧ ಕಲಂ 7,13(1)(ಡಿ) ಸಹವಾಚ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಮಂಜೂರಾತಿಯನ್ನು ನೀಡುತ್ತದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿರ್ವಹಣೆ ನಿಯಮಾವಳಿ 1977ರ ನಿಯಮ 19(1)ರನ್ವಯ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ 17-08-2008ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ. ಸಿ. ಸಿದ್ದಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾ ಮತ್ತು ಸು, ಕಾಫಿಪೋಸಾ ಮತ್ತು ಅಭಿಯೋಗ)

ಪಿ.ಆರ್. 2221

## ಸಹಕಾರ ಸಚಿವಾಲಯ

**ವಿಷಯ** : ದಿನಾಂಕ 30-09-2010ರೊಳಗೆ ನಡೆಸಬೇಕಾಗಿರುವ ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಮಂಡಳಿಯ ಚುನಾವಣೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ : ಸಿಒ 77 ಸಿಎಲ್ಎಂ 2010. ದಿನಾಂಕ 30-03-2010

2) ಅಧ್ಯಕ್ಷರು ದಿ ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇವರ ಪತ್ರದ ದಿನಾಂಕ 31-07-2010.

**ಪ್ರಸ್ತಾವನೆ :**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(2)ರಡಿ ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ದಿ ವೈಯಾಲಿ ಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಸಮಿತಿಯ ಚುನಾವಣೆಯನ್ನು ದಿನಾಂಕ 30-09-2010ರಂದು ಮುಂದೂಡಿ ಆದೇಶ ಹೊರಡಿಸಲಾಗಿದೆ. ಮೇಲೆ ಓದಲಾದ (2)ರ ಮನವಿಯಲ್ಲಿ ಮೇಲ್ಕಂಡ ಸಂಘದ ವಿವಿಧ ಯೋಜನೆಗಳು ಪ್ರಗತಿಯಲ್ಲಿ ಇರುವ ಕಾರಣ ದಿನಾಂಕ 31-03-2012ರ ಒಳಗಾಗಿ ಚುನಾವಣೆ ನಡೆಸಲು ಅನುಮತಿ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 149 ಸಿಎಲ್‌ಎಂ 2010, ಬೆಂಗಳೂರು, ದಿನಾಂಕ: 13–08–2010**

ದಿ ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39(ಎಫ್) ಅನ್ನು ಮಾರ್ಪಾಟು ಮಾಡಿ ಸದರಿ ಬ್ಯಾಂಕಿನ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ 31–03–2011ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ :–** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 31–03–2011 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶ ಮೂಲಕ ಮಾರ್ಪಾಡು ಮಾಡುವಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಆರ್. ಎಸ್. ನೂಲಿ)**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

ಪಿ.ಆರ್. 2222

## ಸಹಕಾರ ಸಚಿವಾಲಯ

**ವಿಷಯ** : ದಿನಾಂಕ 30–09–2010ರೊಳಗೆ ನಡೆಸಬೇಕಾಗಿರುವ ಕರ್ನಾಟಕ ರಾಜ್ಯ ನ್ಯಾಯಾಂಗ ಇಲಾಖೆ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಸಮಿತಿ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ : ಸಿಒ 37 ಸಿಎಲ್‌ಎಂ 2010. ದಿನಾಂಕ 20–02–2010
2) ಕಾರ್ಯದರ್ಶಿ, ಕರ್ನಾಟಕ ರಾಜ್ಯ ನ್ಯಾಯಾಂಗ ಇಲಾಖೆ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ ಅಧ್ಯಕ್ಷರ ಪತ್ರದ ಸಂಖ್ಯೆ : ಕ.ರಾ.ನ್ಯಾ.ಇ.ನೌ.ಗೃ.ಸ.ಸಂ.ನಿ/18/2010–11, ದಿನಾಂಕ 02–08–2010.

**ಪ್ರಸ್ತಾವನೆ :**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(2)ರಡಿ ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯ ನ್ಯಾಯಾಂಗ ಇಲಾಖೆ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಸಮಿತಿಯ ಚುನಾವಣೆಯನ್ನು ದಿನಾಂಕ 30–09–2010ರಂದು ಮುಂದೂಡಿ ಆದೇಶ ಹೊರಡಿಸಲಾಗಿದೆ. ಮೇಲೆ ಓದಲಾದ (2)ರ ಕಾರ್ಯದರ್ಶಿಯವರ ಪತ್ರದಲ್ಲಿ ಮೇಲ್ಕಂಡ ಸಹಕಾರ ಸಂಘವು ಉತ್ತರ ಕರ್ನಾಟಕದಲ್ಲಿ ಸಂಭವಿಸಿದ ನೆರೆ ಹಾವಳಿಯಿಂದಾಗಿ ನೆರೆ ಸಂತ್ರಸ್ತರಿಗೆ ಅಭಿವೃದ್ಧಿ ಕಾಮಗಾರಿಗಳನ್ನು ಹಮ್ಮಿಕೊಳ್ಳುವ ಸಲುವಾಗಿ ಚುನಾವಣೆಯನ್ನು 31–03–2011ರವರೆಗೆ ಮುಂದೂಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 153 ಸಿಎಲ್‌ಎಂ 2010, ಬೆಂಗಳೂರು, ದಿನಾಂಕ: 13–08–2010**

ಮೇಲಿನ ಪರಿಸ್ಥಿತಿಯಲ್ಲಿ ಕರ್ನಾಟಕ ರಾಜ್ಯ ನ್ಯಾಯಾಂಗ ಇಲಾಖೆ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39(ಎಫ್) ಅನ್ನು ಮಾರ್ಪಾಟು ಮಾಡಿ ಸದರಿ ಸಂಘದ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ 31–03–2011ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ :–** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 31–03–2011 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶ ಮೂಲಕ ಮಾರ್ಪಾಡು ಮಾಡುವಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಆರ್. ಎಸ್. ನೂಲಿ)**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

ಪಿ.ಆರ್. 2223

## ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ

**ವಿಷಯ** : 2009–10ನೇ ಸಾಲಿನಲ್ಲಿ 26 ಅಲ್ಪ ಸಂಖ್ಯಾತರ ನೂತನ ವಿದ್ಯಾರ್ಥಿನಿಲಯಗಳಿಗೆ ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ : ಅಸಂಇ 227 ಅಸಂಯೋ 2009, ದಿನಾಂಕ 30–09–2009.
2) ಸರ್ಕಾರದ ಆದೇಶ ಸಂಖ್ಯೆ : ಅಸಂಇ 286 ಅಸಂಯೋ 2009, ದಿನಾಂಕ 22–12–2009
3) ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆರವರ ಕಡತ ಸಂಖ್ಯೆ : ಅಸಂನಿ/ಸಿಬ್ಬಂದಿ/ ಸಿಆರ್–12/2010–11, ದಿನಾಂಕ 06–05–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ 2009–10ನೇ ಸಾಲಿನಲ್ಲಿ ಅಲ್ಪಸಂಖ್ಯಾತರ ವಿದ್ಯಾರ್ಥಿಗಳ ಅನುಕೂಲಕ್ಕಾಗಿ 25 ನೂತನ ಮೆಟ್ರಿಕ್ ನಂತರ ಬಾಲಕ/ಬಾಲಕಿಯರ ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಪಾವಗಡ ಟೌನ್‌ನಲ್ಲಿ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯವನ್ನು 2008–09ನೇ ಸಾಲಿನಲ್ಲಿ ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಏಕ ಕಡತದಲ್ಲಿ ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆಯವರು ಪ್ರಸ್ತಾವನೆಯನ್ನು ಸಲ್ಲಿಸಿ, ಮೇಲೆ ತಿಳಿಸಿರುವ ಎರಡು ಆದೇಶಗಳಲ್ಲಿ ಒಟ್ಟು 26 ವಿದ್ಯಾರ್ಥಿನಿಲಯಗಳಿಗೆ 130 ಹುದ್ದೆಗಳನ್ನು ಸೃಜಿಸಿ ರೂ. 136.72 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 2225–03–277–2–64 ರಾಜ್ಯವಲಯ ಯೋಜನೆಯಡಿಯಲ್ಲಿ ಬಿಡುಗಡೆ ಮಾಡಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಒಘಆ 137 ಒಆಖ 2010, ಬೆಂಗಳೂರು, ದಿನಾಂಕ: 13–08–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2009–10ನೇ ಸಾಲಿನಲ್ಲಿ ಪ್ರಾರಂಭಿಸಲು ಮಂಜೂರಾತಿ ನೀಡಲಾದ 25 ಹೊಸ ಅಲ್ಪಸಂಖ್ಯಾತರ ಮೆಟ್ರಿಕ್ ನಂತರ ಬಾಲಕ/ಬಾಲಕಿಯರ ವಿದ್ಯಾರ್ಥಿನಿಲಯಗಳಿಗೆ ಹಾಗೂ ಒಂದು ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯಗಳಿಗೆ ಈ ಕೆಳಕಂಡಂತೆ 114 ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡಿದೆ.

(1) ಪ್ರತಿ ಮಾದರಿ **ಮೆಟ್ರಿಕ್ ನಂತರ** ಬಾಲಕ/ಬಾಲಕಿಯರ ವಿದ್ಯಾರ್ಥಿನಿಲಯದಲ್ಲಿ ಈ ಕೆಳಗಿನಂತೆ ಹುದ್ದೆಗಳನ್ನು ಸೃಜಿಸಲು ಆದೇಶಿಸಿದೆ :–

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ನಿಲಯ ಪಾಲಕರು | 01 |
| 2 | ಅಡುಗೆಯವರು | 02 |
| 3 | ಅಡುಗೆ ಸಹಾಯಕರು | 01 |
| 4 | ರಾತ್ರಿ ಕಾವಲುಗಾರರು (9 ಬಾಲಕಿಯರ ವಿದ್ಯಾರ್ಥಿನಿಲಯಗಳಿಗೆ ಮಾತ್ರ) | 01 |

ಆ ಪ್ರಕಾರ ಒಟ್ಟು 25 ನಿಲಯ ಪಾಲಕರು, 50 ಅಡುಗೆಯವರು, 25 ಅಡುಗೆ ಸಹಾಯಕರು ಮತ್ತು 9 ರಾತ್ರಿ ಕಾವಲುಗಾರರ ಹುದ್ದೆಗಳನ್ನು ಸೃಜಿಸಲಾಗಿದೆ.

(2) ಗ್ರೂಪ್–'ಡಿ' ಹುದ್ದೆಗಳನ್ನು ಹೊರ ಗುತ್ತಿಗೆ ಆಧಾರದ ಮೇಲೆ ತುಂಬಬಹುದು

**ಒಂದು ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯ**

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಮೇಲ್ವಿಚಾರಕರು | 01 |
| 2 | ಅಡುಗೆಯವರು | 02 |
| 3 | ಅಡುಗೆ ಸಹಾಯಕರು | 01 |
| 4 | ರಾತ್ರಿ ಕಾವಲುಗಾರರು | 01 |

ಈ ಸಂಬಂಧ ವೆಚ್ಚವನ್ನು 2010–11ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2225–03–277–2–64 ರಾಜ್ಯವಲಯ ಯೋಜನೆಯಡಿ ಒದಗಿಸಿರುವ ಅನುದಾನದಲ್ಲಿ ಭರಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 374 ವೆಚ್ಚ–3/10, ದಿನಾಂಕ 06–06–2010ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಸಾಯೀದಾ ಬಾನು)**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

ಪಿ.ಆರ್. 2224

## ಇಂಧನ ಸಚಿವಾಲಯ

**ವಿಷಯ :** ಶ್ರೀ ಎಸ್.ಬಿ. ಖಾನಾಪುರ, ವಿದ್ಯುತ್ ಪರಿವೀಕ್ಷಕರವರು ದಿನಾಂಕ: 11.3.2008 ರಿಂದ 14.4.2008 ರವರೆಗೆ ಹಾಕಿಕೊಂಡ 33 ದಿನಗಳ ಪರಿವರ್ತಿತ ರಜೆ ಮಂಜೂರಾತಿ ಬಗ್ಗೆ.

**ಓದಲಾಗಿದೆ :** ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರ ಸಂಖ್ಯೆ: ಮುವಿಪ/ವಿಪ(2)/ಅ(ಆ)/ಸಿಸ1/23357/09–10 ದಿನಾಂಕ: 27.11.2009.

**ಪ್ರಸ್ತಾವನೆ :**

ಮುಖ್ಯ ವಿದ್ಯುತ್ ಪರಿವೀಕ್ಷಕರು ತಮ್ಮ ಪತ್ರದಲ್ಲಿ ಶ್ರೀ ಎಸ್.ಬಿ. ಖಾನಾಪುರ, ವಿದ್ಯುತ್ ಪರಿವೀಕ್ಷಕರವರು ದಿನಾಂಕ: 11.3.2008 ರಿಂದ 14.4.2008 ರವರೆಗೆ ಹಾಕಿಕೊಂಡ 33 ದಿನಗಳ ಪರಿವರ್ತಿತ ರಜೆ ಮಂಜೂರಾತಿಗೆ ಸಂಬಂಧಿಸಿದಂತೆ ಮಹಾಲೇಖಪಾಲರು ತಮ್ಮ ಪತ್ರ ಸಂಖ್ಯೆ: ಜಿಇ 12 ಎ6/304 ರ ಪ್ರಕಾರ ಮಂಜೂರಾತಿಗೆ ರಜಾ ಶೀರ್ಷಿಕೆಯನ್ನು ಕರ್ನಾಟಕ ನಾಗರಿಕ ಸೇವಾ ನಿಯಮಗಳ ನಿಯಮ 198 ರನುಸಾರ ರಜೆ ಮಂಜೂರು ಮಾಡುವಂತೆ ಮುಖ್ಯ ವಿದ್ಯುತ್ ಪರಿವೀಕ್ಷಕರಿಗೆ ನೀಡಿರುವ ಸೂಚನೆ ಮೇರೆಗೆ ಮುಖ್ಯ ವಿದ್ಯುತ್ ಪರಿವೀಕ್ಷಕರು ಸರ್ಕಾರಕ್ಕೆ ರಜೆ ಮಂಜೂರಾತಿಗಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ವಿದ್ಯುತ್ ಪರಿವೀಕ್ಷಕರ ರಜೆ ಮಂಜೂರಾತಿಗೆ ಸಂಬಂಧಿಸಿದಂತೆ ಮುಖ್ಯ ವಿದ್ಯುತ್ ಪರಿವೀಕ್ಷಕರು ವಿಳಂಬವಾಗಿ ಸರ್ಕಾರಕ್ಕೆ ಪ್ರಸ್ತಾವನೆಗೆ ಸಲ್ಲಿಸಿದ್ದರಿಂದ ದಿನಾಂಕ: 11.12.2009 ರಲ್ಲಿ ಕಾರಣ ಕೇಳಲಾಗಿದ್ದು, ಅವರು ದಿನಾಂಕ: 11.03.2008 ರಿಂದ 14.04.2008 ರ ಅವಧಿಯ ರಜೆಗೆ ಶೀರ್ಷಿಕೆಯನ್ನು ಒಂದು ವರ್ಷದ ನಂತರ ನೀಡಲ್ಪಟ್ಟಿರುವುದರಿಂದ ಸರ್ಕಾರದ ವತಿಯಿಂದ ರಜೆ ಮಂಜೂರು ಅಗತ್ಯವೆಂದು ಮಹಾಲೇಖಪಾಲರು ತಮ್ಮ ಪತ್ರ ಸಂಖ್ಯೆ: ಜಿಇ 12 ಎ6/569 ದಿನಾಂಕ: 08.10.2009 ರ ಪತ್ರದಲ್ಲಿ ಕೋರಿರುವುದರಿಂದ ಸರ್ಕಾರಕ್ಕೆ ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ.

ಕರ್ನಾಟಕ ನಾಗರಿಕ ಸೇವಾ ನಿಯಮಗಳು ನಿಯಮ 198 ಈ ಕೆಳಕಂಡಂತಿದೆ.

**"**ಕರ್ತವ್ಯದಿಂದ ಮುಕ್ತನಾದ ದಿನಾಂಕದಿಂದ ಒಂದು ವರ್ಷವು ಗತಿಸಿದ ತರುವಾಯ ರಜೆಯನ್ನು ಪೂರ್ವಾಭಾವಿಯಾಗಿ ಮಂಜೂರು ಮಾಡಿದಾಗ ಅಥವಾ ಒಂದು ಬಗೆಯ ರಜೆಯನ್ನು ಈ ನಿಯಮಗಳ ಮೇರೆಗೆ ದೊರೆಯಬಹುದಾದ ಯಾವುದೇ ಇತರ ಬಗೆಯ ರಜೆಯನ್ನು ಪೂರ್ವಾನ್ವಯವಾಗಿ ಪರಿವರ್ತಿಸಿದಾಗ ಸರ್ಕಾರದ ಮಂಜೂರಾತಿಯಿಲ್ಲದೆ ರಜಾ ಭತ್ಯೆಗಳು ಸಂದಾಯವಾಗತಕ್ಕದ್ದಲ್ಲ**"**.

ಮೇಲೆ ತಿಳಿಸಿರುವ ನಿಯಮಗಳನ್ವಯ ಸರ್ಕಾರದ ಮಟ್ಟದಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 154 ಇಬಿಎಸ್ 2009 ಬೆಂಗಳೂರು, ದಿನಾಂಕ 29–07–2010**

ಮೇಲೆ ವಿವರಿಸಲಾದ ಸಂದರ್ಭಕ್ಕನುಸಾರವಾಗಿ ಶ್ರೀ ಎಸ್.ಬಿ. ಖಾನಾಪುರ, ವಿದ್ಯುತ್ ಪರಿವೀಕ್ಷಕರವರು ದಿನಾಂಕ: 11.3.2008 ರಿಂದ 14.4.2008 ರವರೆಗೆ ಹಾಕಿಕೊಂಡ 33 ದಿನಗಳ ಪರಿವರ್ತಿತ ರಜೆಯನ್ನು ಮಾರ್ಚ್ 2009 ರಿಂದ ನೀಡಬೇಕಾದ ವಾರ್ಷಿಕ ವೇತನ ಬಡ್ತಿ (Increment) ಮಂಜೂರು ಮಾಡುವ ಸಂಬಂಧ ಕರ್ನಾಟಕ ನಾಗರಿಕ ಸೇವಾ ನಿಯಮಗಳು ನಿಯಮ 198 ರನ್ವಯ ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2029

**ಸುಜಾತಮ್ಮ**

ಪೀಠಾಧಿಕಾರಿ, ಇಂಧನ ಇಲಾಖೆ

## COMMERCE AND INDUSTRIES SECRETARIAT

**Sub :** Approval to the Project Proposal of M/s Kirloskar Ferrous Industries Ltd., to establish a "Sinter Plant" of 0.50 Million MTPA capacity using iron ore fines with 4.5 MW additional power generation and to increase the manufacturing capacity of pig iron at Bevinahalli Village, Hitnal Post, Koppal Taluk And District.

**Read :**
1. Proceedings of the 21ST State High Level Clearance Committee (SHLCC) Meeting held on 29-03-2010
2. Proceedings of the 23RD State High Level Clearance Committee (SHLCC) Meeting held on 19-06-2010

**PREAMBLE:**

M/s Kirloskar Ferrous Industries Ltd., proposes to establish a "Sinter Plant" of 0.50 Million MTPA capacity using iron ore fines with 4.5 MW additional power generation and to increase the manufacturing capacity of pig iron at Bevinahalli Village, Hitnal Post, Koppal Taluk And District., with an investment of Rs. 150 crores, generating employment to about 80 persons.

In the 23rd State High Level Clearance Committee (SHLCC) Meeting held on 19-06-2010, the proposal of the Company was discussed and approved.

Government has examined the recommendations made by the State High Level Clearance Committee in its 23rd Meeting held on 19-06-2010, in all aspects.

Hence the following Order.

**Government Order No. CI 132 SPI 2010, Bangalore, Dated 21-07-2010**

Government is pleased to accord in principle approval to the Project Proposal of M/s Kirloskar Ferrous Industries Ltd., to establish a "Sinter Plant" of 0.50 Million MTPA capacity using iron ore fines with 4.5 MW additional powergeneration and to increase

the manufacturing capacity of pig iron at Bevinahalli Village, Hitnal Post, Koppal Taluk and District., with an investment of Rs. 150 crores, generating employment to about 80 persons.and extend the following infrastructure facilities, incentives and concessions.

**INFRASTRUCTURE FACILITIES :**

1. **Land :** Existing land.
2. **Water :** 90.92 KLD from the downstream of Tungabadra Reservoir subject to approval of Water Resources Department.
3. **Power :** 3125 KVA to be serviced by GESCOM
4. **Incentives & Concessions :** As applicable under Industrial Policy of the State.

**GENERAL TERMS AND CONDITIONS :**

1. **Ore :** The ore based industries to make arrangements on their own for the ore requirement and State Government does not guarantee the ore for these projects.
2. **Environment :** The promoters to obtain CFE and CFO from KSPCB and environmental clearance from MOEF, GOI.
3. **Employment :** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
4. **Social Infrastructure Development :** The company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
5. **Vendor Development :** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring

6.**Others :**

(a) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.

(b) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the department..

This approval is valid for a period of two years from the date of issue.

By Order and in the name of the Governor of Karnataka

**Aparna Pavate**

Desk Officer (Technical Cell)

Commerce & Industries Department

P.R. 2030

## INFRASTRUCTURE DEVELOPMENT SECRETARIAT

**Subject:** Development of Greenfield Airport at Bellary on Public Private participation (PPP) basis-selection of Private Developer-reg.

**Read :** G.O. No. IDD 120 DIA 2008 dated 6-10-2008

G.O. No. IDD 120 DIA 2008 dated 25-10-2008

**PREAMBLE:**

1. In the Government Order dated 6-10-2008, sanction was accorded for development of Bellary Airport on Public Private Participation (PPP) basis. It was decided that iDeCK would be the nodal agency and will also obtain the required clearances for this project in addition to providing assistance in the selection of a developer. Airports Authority of India have conducted a study and recommended the site which is 10 kms away from Bellary city on Sanganakallu-Moka road as the most suitable site for the development of airport to handle A 320/319 type aircrafts.
2. Bids were invited from the interested developers for the development of airport. A single stage bidding process comprising of expression of interest and request for proposal was adopted for selection of the successful bidder for the project. Accordingly RFP was issued on 15-01-2009, in response to which a single bid was received from M/s Marg Ltd., chennai.
3. The Technical bid was opened on 22-01-2010 and the tender scrutiny committee constituted for this project scrutinized the technical bids and recommended to open the financial bid.
4. The financial bid submitted by the developer was opened on 24-03-2010. The financial offer given by M/s Marg Ltd. was in the form of premium per acre per year. The bid quoted a premium of Rs. 36,000/- per acre per year.

5. The Govt. after careful examination of the above aspects and technical evaluation, considers to entrust the responsibility of development of Greenfield airport at Bellary to M/s. Marg. Ltd., Chennai, under PPP framework, Hence this order.

**Government Order No. IDD 113 ITS 2008, Bangalore Dated 02-08-2010**

The State Govt. after careful consideration of the above mentioned circumstances, have accorded approval for the following proposals:

1. The single bid proposal of M/s Marg Ltd., Chennai, is accepted.
2. An amount of Rs. 121.93 crores towards the cost of the land shall be borne by the Govt and the expenditure is debitable to the provision made under the head of account 5465-01-190-1-05 Development of Minor Airports.
3. To issue letter of award to M/s Marg Ltd., Chennai, to implement the project.

By Order and in the name of the Governor of Karnataka

**R. Shivalingaiah**

P.R. 2031

Under Secretary to Govt. PPP Cell,

Infrastructure Development Department.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** Permit Management System – Servers for Data Centre ಸೇವೆಯನ್ನು ಗಣಿ ಮತ್ತು ಭೂವಿಜ್ಞಾನ ಇಲಾಖೆಗೆ ಅಳವಡಿಸುವ ಕುರಿತು.

**ಓದಲಾಗಿದೆ :** (1) ದಿನಾಂಕ: 08-07-2010ರ ಕೇಂದ್ರ ಸರ್ಕಾರದ NIC ಪತ್ರ ಸಂಖ್ಯೆ: NIC-KASC-DMG.

(2) ದಿನಾಂಕ: 14-07-2010ರ ಪತ್ರ ಸಂಖ್ಯೆ:ಗಭೂಇ.ಖವಿ:ಪಿಎಂಎಸ್:2010-11:2472.

**ಪ್ರಸ್ತಾವನೆ :**

ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ, ಗಣಿ ಮತ್ತು ಭೂವಿಜ್ಞಾನ ಇಲಾಖೆಯ Permit Management System – Servers for Data Centre ಇವುಗಳನ್ನು ಉನ್ನತೀಕರಿಸಿ Permit Management System (PMS) and intermine ಗಳ ಅಳವಡಿಕೆಗೆ ಬೇಕಾಗುವ Servers components ಗಳನ್ನು ಕೂಡಲೇ ಅಳವಡಿಸಿಕೊಳ್ಳುವಂತೆ ಕೋರಿದ್ದು, ಪ್ರಸ್ತಾವಿತ Component ಗಳನ್ನು ರೂ. 18,50,264/- ಗಳ ವೆಚ್ಚದಲ್ಲಿ National Informatics Centre Services Inc ಯಿಂದ ಖರೀದಿಸಲು ಹಾಗೂ ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2853-02-001-0-01 ಯೋಜನೆ-125 ಆಧುನೀಕರಣ ಅಡಿಯಲ್ಲಿ ಭರಿಸಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ. 92: ಎಂಜಿಎಸ್. 2010, ಬೆಂಗಳೂರು, ದಿನಾಂಕ 2-08-2010**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲಿ Permit Management System – Servers for Data Centre ಇವುಗಳನ್ನು ಉನ್ನತೀಕರಿಸಿ Permit Management System (PMS) and intermine ಗಳ ಅಳವಡಿಕೆಗೆ ಬೇಕಾಗುವ Servers components ಗಳನ್ನು ರೂ. 18,50,264/- (ಹದಿನೆಂಟು ಲಕ್ಷ ಐವತ್ತು ಸಾವಿರದ ಇನ್ನೂರ ಅರವತ್ತನಾಲ್ಕು ರೂಪಾಯಿಗಳು)ಗಳ ವೆಚ್ಚದಲ್ಲಿ National Informatics Centre Services Inc ಯಿಂದ ಖರೀದಿ ನಿಯಮಗಳನ್ನು ಪಾಲಿಸುವ ಷರತ್ತಿಗೊಳಪಡಿಸಿ, ನಿಯಮಾನುಸಾರ ಖರೀದಿಸಲು ಹಾಗೂ ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2853-02-001-0-01 ಯೋಜನೆ-125 ಆಧುನೀಕರಣ ಇದರ ಅಡಿಯಲ್ಲಿ ಭರಿಸಲು ಸರ್ಕಾರದ ಅನುಮೋದನೆಯನ್ನು ನೀಡಿದೆ.

ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರು, ದಿನಾಂಕ: 27-7-2010ರ ಟಿಪ್ಪಣಿ ಸಂಖ್ಯೆ:ವಾಕೈ 205 ಆಂಆಸ(2)2010 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2032

**ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ (ಗಣಿ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## HEALTH AND FAMILY WELFARE SECRETARIAT

**Subject:** Increase of bed strength from 175 to 200 at Government Ayurveda Medical College and Hospital, Mysore.

**Read :** 1. Ministry of Health & Family Welfare, Department of Ayush, Government of India Letter No. R. 17011/38/2009-EP dated: 29-7-2010 Addressed to Principal, Government Ayurveda Medical College, Mysore.

2. Letter No. Ayush/44/Bud(1)/2010-11 dated: 31-7-2010.

**PREAMBLE:**

Government of India, Ministry of Health & Family Welfare, Department of Ayush in its letter dated: 29-7-2010 addressed to Principal, Government Ayurveda Medical College and Hospital Mysore and copied to Secretary, CCIM, New Delhi and stated therein that the Institute was visited suomoto on 20-1-2010 and 21-1-2010 to re-assess the facilities available in the Institution for

teaching and practical training in connection with the grant of permission to this college in BAMS & PG courses. After examining the facilities available in the Institution as per the relevant regulations and approved norms of the CCIM under the IMCC Act, it has been observed that this college is not fulfilling the basic eligibility conditions. One of the condition is as follows among others.

1. There are only 175 bedded hospital against the total requirement of 185 beds (minimum 150 beds for a PG Institution+35 additional beds for 7 clinical PG seats)

Further, it is also mentioned that hearing has been fixed on 3-8-2010 at 11 a.m. before the designated Hearing Committee in the Department of Ayush, New Delhi and opportunity is given to present the case with oral and written submissions along with the valid documents and records/proofs against the shortcomings as indicated above. It is also submitted that as to why the permission to take admissions in BAMS/PG courses under section 13C of the IMCC Act for the year 2010-11 should not be denied to the College.

In view of the above facts, the Director, Ayush in his letter dated: 31-7-2010 has submitted a proposal and to state that there is a urgent need to increase the bed strength from 175 to 200 to provide clinical facilities to UG and PG students with an intention to give Ayurvedic Health Care facilities to the people of Mysore region. Further it is also submitted that Government Ayurveda Medical College and Hospital, Mysore is conducting UG Course with an intake of 50 seats and PG Course with an intake of 12 seats (Kaya Chikistsa & Siddantha disciples) and therefore clinical facilities should be given to such students and recommended the proposal for increase of present bed strength of the Hospital is to be enhanced from 175 to 200, if not the college may face derecognization for conducting UG & PG Courses.

The proposal of the Director, Ayush is examined in detail and following is the Order

**Government Order No. HFW 223 PTD 2010, Bangalore Dated 31-07-2010**

In view of the circumstances explained in the preamble and after considering the proposal of Director, Ayush, sanction is hereby accorded to enhance the bed strength from 175 to 200 at Government Ayurvedic Medical College & Hospital, Mysore.

By Order and in the name of the Governor of Karnataka

**R.S. ITAGI**

Under Secretary to Government

Health and Family Welfare Department

P.R. 2033

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2009–10 ನೇ ಸಾಲಿಗೆ ಎಸ್‌ಜಿಎಸ್‌ವೈಯಡಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಅನುದಾನಕ್ಕನುಗುಣವಾಗಿ ಉಳಿಕೆ ರಾಜ್ಯದ ಪಾಲಿನ ಅನುದಾನವನ್ನು 2010–11 ನೇ ಸಾಲಿನ ಆಯವ್ಯಯದಿಂದ ಭರಿಸಿ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** (1) ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ–12022/1/2009 ಎಸ್‌ಜಿಎಸ್‌ವೈ–I (10) ದಿನಾಂಕ: 16–04–09 ಮತ್ತು (42) ದಿನಾಂಕ: 07–08–09. (72) ದಿನಾಂಕ: 03–11–09, (73) ದಿನಾಂಕ: 12–11–09, (102) ದಿನಾಂಕ: 14–12–09, (120) ದಿನಾಂಕ: 22–12–09 (132) ದಿನಾಂಕ: 30–12–09 (156) ದಿನಾಂಕ: 19–01–10, (159) ದಿನಾಂಕ: 25–01–10 ಮತ್ತು (175) ದಿನಾಂಕ: 08–02–10, (216) ದಿನಾಂಕ: 25–02–10 ಮತ್ತು (242), ದಿನಾಂಕ: 05–03–10, (274) ದಿನಾಂಕ: 29–03–10, (280) ದಿನಾಂಕ: 29–03–10, (281) ದಿನಾಂಕ: 29–03–10, (282) ದಿನಾಂಕ: 29–03–10 ಮತ್ತು (305) ದಿನಾಂಕ: 30–03–10.

(2) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 7 ಎಸ್‌ಜಿವೈ 2009, ಬೆಂಗಳೂರು, ದಿನಾಂಕ: 20–05–09, 25–09–09, 08–12–2009, 25–01–2010, 25–02–10, 20–03–10 ಮತ್ತು 29–03–10.

**ಪ್ರಸ್ತಾವನೆ :**

ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಓದಲಾಗಿದೆ (1) ರಲ್ಲಿ 2009–10ನೇ ಸಾಲಿನಲ್ಲಿ ರಾಜ್ಯದ 29 ಜಿಲ್ಲಾ ಪಂಚಾಯತಿಗಳಿಗೆ ಒಟ್ಟು ರೂ. 86,66,22,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ರೂ. 28,88,75,000 ಬಿಡುಗಡೆ ಮಾಡಬೇಕಿತ್ತು. ಆದರೆ ರಾಜ್ಯದ 2009–10ನೇ ಸಾಲಿನ ಆಯವ್ಯಯದಲ್ಲಿ ಕೆಲವೊಂದು ಜಿಲ್ಲಾ ಪಂಚಾಯತಿಗಳಿಗೆ ಒದಗಿಸಿರುವ ಅನುದಾನದಲ್ಲಿ ಕೊರತೆಯಿದ್ದುದರಿಂದ ಆಯವ್ಯಯದ ಲಭ್ಯತೆಗೆ ಅನುಸಾರವಾಗಿ ಒಟ್ಟು ರೂ. 22,30,45,000 ಗಳನ್ನು ಜಿಲ್ಲಾ ಪಂಚಾಯತಿಗಳಿಗೆ ಓದಲಾಗಿದೆ (2) ರ ಆದೇಶಗಳಲ್ಲಿ ಬಿಡುಗಡೆಗೊಳಿಸಲಾಗಿತ್ತು. 2009–10 ನೇ ಸಾಲಿನಲ್ಲಿ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಬೇಕಾಗಿದ್ದ ರಾಜ್ಯದ ಪಾಲಿನ ಉಳಿಕೆ ಅನುದಾನ ರೂ.6,58,27,000ಗಳನ್ನು 2010–11 ನೇ ಸಾಲಿನಲ್ಲಿ ರಾಜ್ಯದ ಪಾಲಿನ ಅನುದಾನಕ್ಕೆ ರಾಜ್ಯದ ಆಯವ್ಯಯದಲ್ಲಿ ನಿಗದಿಪಡಿಸಿದ ಅನುದಾನ ರೂ. 24,05,12,000 ದಿಂದ ಭರಿಸಿ ಬಿಡುಗಡೆ ಮಾಡಬೇಕಾಗಿದೆ.

ಆದರೆ, ಬೆಂಗಳೂರು ಗ್ರಾಮಾಂತರ, ಕೋಲಾರ ಮತ್ತು ರಾಮನಗರ ಜಿಲ್ಲಾ ಪಂಚಾಯತಿಗಳಿಗೆ 2009–10ನೇ ಸಾಲಿನ ಉಳಿಕೆ ಅನುದಾನ ಬಿಡುಗಡೆ ಮಾಡಲು 2010–11 ನೇ ಸಾಲಿಗೆ ರಾಜ್ಯದ ಆಯವ್ಯಯದಲ್ಲಿ ನಿಗದಿಪಡಿಸಿದ ಅನುದಾನದ ಕೊರತೆಯಿರುವುದರಿಂದ ಈ ಜಿಲ್ಲಾ ಪಂಚಾಯತಿಗಳಿಗೆ ಲಭ್ಯತೆ ಅನುಸಾರ ಬಿಡುಗಡೆಗೊಳಿಸಬೇಕಾಗಿದೆ. ಆದುದರಿಂದ, 2010–11 ನೇ ಸಾಲಿಗೆ ಒದಗಿಸಿದ ರಾಜ್ಯದ ಆಯವ್ಯಯದಿಂದ ಭರಿಸಿ ರೂ. 6,31,67,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 7 ಎಸ್‌ಜಿವೈ 2009, ಬೆಂಗಳೂರು, ದಿನಾಂಕ 22–07–2010**

2009–10 ನೇ ಸಾಲಿನಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಕೇಂದ್ರ ಸರ್ಕಾರ ಬಿಡುಗಡೆಗೊಳಿಸಿದ ಅನುದಾನಕ್ಕೆ ಅನುಗುಣವಾಗಿ 2010–11 ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಜಿಲ್ಲಾ ಪಂಚಾಯತಿಗಳಿಗೆ ನಿಗದಿಪಡಿಸಿದ ಅನುದಾನದ ಲಭ್ಯತೆಗೆ ಅನುಸಾರ ರಾಜ್ಯದ ಪಾಲಿನ ಅನುದಾನವನ್ನು ರೂ. 6,31,67,000 ಗಳನ್ನು (ರೂ. ಆರು ಕೋಟಿ ಮುವತ್ತೊಂದು ಲಕ್ಷದ ಅರವತ್ತೇಳು ಸಾವಿರ ಮಾತ್ರ) ಭರಿಸಿ ಲಗತ್ತಿಸಿರುವ ಅನುಬಂಧದಲ್ಲಿ ತೋರಿಸಿರುವಂತೆ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು :**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದ ನಡುವೆ 75:25 ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕಶೀರ್ಷಿಕೆ" 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6–ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2010–2011 ನೇ (2501–01–198–6–01)" (ಲಿಂಕ್ ಕೋಡ್ 2501–01–800–0–07) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ 14–07–2005 ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ:ಗ್ರಾಅಪ 14 ಎಸ್.ಜೆ.ವೈ 2007 ದಿನಾಂಕ 18–04–2007 ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2010–11 ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ online upload ಮಾಡಿ ಪ್ರತಿಯನ್ನು ಸ್ವಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಅಪರ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ : ಗ್ರಾಅಪ 156 ಪಿಬಿಎಸ್ 2010 ದಿನಾಂಕ: 19–07–2010 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಕೆ. ರಂಗಸ್ವಾಮಿ**
ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ.ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

***ಅನುಬಂಧ***

*ಸರ್ಕಾರದ ಆದೇಶದ ಸಂಖ್ಯೆ : ಗ್ರಾಅಪ 7. ಎಸ್‌ಜಿವೈ 2009, ಬೆಂಗಳೂರು, ದಿನಾಂಕ : 22–07–2010*

*(ರೂ.ಗಳಲ್ಲಿ)*

| *ಕ್ರ. ಸಂ.* | *ಜಿಲ್ಲಾ ಪಂಚಾಯತಿಯ ಹೆಸರು* | *ಜಿ.ಪಂ. ಕೋಡ್* | *ಡಿ.ಡಿ.ಓ ಕೋಡ್* | *2009–10ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಒಟ್ಟು ಅನುದಾನ* | *ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಾಗಿದ್ದ ಅನುದಾನ* | *2009–10ನೇ ಸಾಲಿನ ರಾಜ್ಯ ಆಯವ್ಯಯದ ಕೊರತೆಯಿಂದಾಗಿ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದ ಒಟ್ಟು ಅನುದಾನ* | *ಬಾಕಿ ಉಳಿದ ಅನುದಾನವನ್ನು 2010–11ನೇ ಸಾಲಿನಲ್ಲಿ ಭರಿಸಿ ಬಿಡುಗಡೆ ಮಾಡಬೇಕಾದ ಅನುದಾನ* | *2010–11ನೇ ಸಾಲಿನ ಆಯವ್ಯಯದಲ್ಲಿ ಜಿಲ್ಲೆಗೆ ನಿಗದಿಪಡಿಸಿದ ಅನುದಾನ* | *2010–11ನೇ ಸಾಲಿನಲ್ಲಿ ಭರಿಸಿ ಬಿಡುಗಡೆ ಮಾಡಬೇಕಾದ ಅನುದಾನ* |
|---|---|---|---|---|---|---|---|---|---|
| *1* | *2* | *3* | *4* | *5* | *6* | *7* | *8* | *9* | *10* |
| 1 | ಬಾಗಲಕೋಟೆ | 461 | 2900ZZ0001 | 2,20,28,000 | 73,43,000 | 63,00,000 | 10,43,000 | 63,00,000 | 10,43,000 |
| 2 | ಬೆಂಗಳೂರು (ಗ್ರಾ) | 402 | 0300ZZ8001 | 1,1287.000 | 37,62,000 | 17,85,000 | 19,77,000 | 17,00,000 | 17,00,000 |
| 3 | ಬೆಂಗಳೂರು ನಗರ | 401 | 0100ZZ8001 | 93,78,000 | 31,26,000 | 26,85,000 | 4,41,000 | 26,85,000 | 4,41,000 |

| | | | | | | | | | |
|---|---|---|---|---|---|---|---|---|---|
| 4 | ಬೆಳಗಾಂ | 413 | 2200ZZ0002 | 4,73,97,000 | 1,57,99,000 | 1,42,45,000 | 15,54,000 | 1,80,00,000 | 15,54,000 |
| 5 | ಬಳ್ಳಾರಿ | 418 | 3400ZZ0001 | 5,17,39,000 | 1,72,46,000 | 1,48,13,000 | 24,33,000 | 1,48,13,000 | 24,33,000 |
| 6 | ಬೀದರ್ | 419 | 3800ZZ5701 | 3,66,68,000 | 1,22,23,000 | 1,00,00,000 | 22,33,000 | 94,09,000 | 22,33,000 |
| 7 | ಬಿಜಾಪುರ | 414 | 2800ZZ9152 | 4,31,65,000 | 1,43,88,000 | 1,00,12,000 | 43,76,000 | 1,23,00,000 | 43,76,000 |
| 8 | ಚಾಮರಾಜನಗರ | 456 | 1000ZZ0001 | 4,56,89,000 | 1,52,30,000 | 82,52,000 | 69,78,000 | 90,00,000 | 69,78,000 |
| 9 | ಚಿಕ್ಕಮಗಳೂರು | 408 | 1800ZZ0017 | 2,57,51,000 | 85,84,000 | 42,72,000 | 43,12,000 | 59,00,000 | 43,12,000 |
| 10 | ಚಿಕ್ಕಬಳ್ಳಾಪುರ | 453 | 0600ZZ0001 | 1,68,82,000 | 56,27,000 | 35,23,000 | 21,04,000 | 35,47,000 | 21,04,000 |
| 11 | ಚಿತ್ರದುರ್ಗ | 403 | 1600ZZ0001 | 3,35,66,000 | 1,11,89,000 | 1,03,10,000 | 8,79,000 | 1,05,00,000 | 8,79,000 |
| 12 | ದಕ್ಷಿಣ ಕನ್ನಡ | 409 | 1900ZZ0047 | 1,66,56,000 | 55,52,000 | 50,74,000 | 4,78,000 | 57,35,000 | 4,78,000 |
| 13 | ದಾವಣಗೆರೆ | 451 | 1700ZZ0002 | 2,97,47,000 | 99,16,000 | 85,16,000 | 14,00,000 | 75,00,000 | 14,00,000 |
| 14 | ಧಾರವಾಡ | 415 | 2500ZZ8798 | 1,85,57,000 | 61,86,000 | 53,13,000 | 8,73,000 | 53,13,000 | 8,73,000 |
| 15 | ಗದಗ್ | 462 | 2600ZZ0001 | 2,73,46,000 | 91,15,000 | 82,98,000 | 8,17,000 | 84,32,000 | 8,17,000 |
| 16 | ಗುಲ್ಬರ್ಗಾ | 417 | 3200ZZ0003 | 5,36,42,000 | 1,78,81,000 | 1,53,57,000 | 25,24,000 | 1,02,81,000 | 25,24,000 |
| 17 | ಹಾಸನ | 410 | 1300 ZZ0003 | 2,68,87,000 | 89,62,000 | 75,00,000 | 14,62,000 | 70,00,000 | 14,62,000 |
| 18 | ಹಾವೇರಿ | 463 | 2700 ZZ0001 | 3,21,63,000 | 1,07,21,000 | 92,00,000 | 15,21,000 | 92,00,000 | 15,21,000 |
| 19 | ಕೊಡಗು | 411 | 1200 ZZ0001 | 36,88,000 | 12,29,000 | 12,29,000 | 0 | 21,00,000 | 0 |
| 20 | ಕೋಲಾರ | 404 | 0700 ZZ8002 | 2,29,07,000 | 76,36,000 | 31,84,000 | 44,52,000 | 40,00,000 | 40,00,000 |
| 21 | ಕೊಪ್ಪಳ | 466 | 1500 ZZ0010 | 4,62,75,000 | 1,54,25,000 | 1,06,15,000 | 48,10,000 | 1,32,00,000 | 48,10,000 |
| 22 | ಮಂಡ್ಯ | 412 | 1100 ZZ0001 | 3,19,17,000 | 1,06,39,000 | 70,99,000 | 35,40,000 | 1,00,00,000 | 35,40,000 |
| 23 | ಮೈಸೂರು | 407 | 0900 ZZ0001 | 4,26,59,000 | 1,42,20,000 | 1,22,00,000 | 20,20,000 | 1,02,00,000 | 20,20,000 |
| 24 | ರಾಯಚೂರು | 420 | 3600 ZZ0001 | 3,89,49,000 | 1,29,83,000 | 76,35,000 | 53,48,000 | 1,00,00,000 | 53,48,000 |
| 25 | ರಾಮನಗರ | 452 | 0400 ZZ0001 | 2,04,78,000 | 68,26,000 | 31,95,000 | 36,31,000 | 17,00,000 | 17,00,000 |
| 26 | ಶಿವಮೊಗ್ಗ | 405 | 1400 ZZ0002 | 3,70,68,000 | 1,23,56,000 | 1,06,12,000 | 17,44,000 | 1,06,12,000 | 17,44,000 |
| 27 | ತುಮಕೂರು | 406 | 0800 ZZ0001 | 4,83,84,000 | 1,61,28,000 | 1,36,30,000 | 24,98,000 | 1,50,00,000 | 24,98,000 |
| 28 | ಉಡುಪಿ | 457 | 2000 ZZ0001 | 1,27,60,000 | 42,53,000 | 38,64,000 | 3,89,000 | 40,00,000 | 3,89,000 |
| 29 | ಉತ್ತರ ಕನ್ನಡ | 416 | 3000 ZZ0080 | 1,29,89,000 | 43,30,000 | 43,30,000 | 0 | 66,16,000 | 0 |
| | ಒಟ್ಟು | | | 86,66,22,000 | 28,88,75,000 | 22,30,45,000 | 6,58,27,000 | 23,50,43,000 | 6,31,67,000 |

ಪಿ.ಆರ್. 2034

**ಡಿ.ಕೆ. ರಂಗಸ್ವಾಮಿ**
ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ.ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಪೊಲೀಸ್ ಇಲಾಖೆಯಲ್ಲಿನ ಪೊಲೀಸ್ ಕಾನ್ಸ್‌ಟೇಬಲ್ ಮತ್ತು ಪೊಲೀಸ್ ಹೆಡ್ ಕಾನ್ಸ್‌ಟೇಬಲ್‌ಗಳಿಗೆ ವಾರದ ರಜೆಯ ಬದಲಿಗೆ ನೀಡಲಾಗುತ್ತಿರುವ ವಾರದ ಭತ್ಯೆಯನ್ನು ಹೆಚ್ಚಿಸುವ ಕುರಿತು ಆದೇಶ.

**ಓದಲಾದ :** 1) ಸರ್ಕಾರಿ ಆದೇಶ ಸಂಖ್ಯೆ : ಒಸಾಇ 186 ಪೊಸಿಇ 1997, ದಿನಾಂಕ 6–12–2007.

2) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಇವರ ಪತ್ರ ಸಂಖ್ಯೆ : ಆರ್‌ಎಲ್‌ಎನ್ (1)8/1997/98, ದಿನಾಂಕ : 22–4–2010.

**ಪ್ರಸ್ತಾವನೆ :–**

ಪೊಲೀಸ್ ಇಲಾಖೆಯಲ್ಲಿನ ಪೊಲೀಸ್ ಕಾನ್ಸ್‌ಟೇಬಲ್ ಮತ್ತು ಪೊಲೀಸ್ ಹೆಡ್ ಕಾನ್ಸ್‌ಟೇಬಲ್ ರವರುಗಳು ವಾರದ ರಜೆಯ ದಿನವೂ ಕರ್ತವ್ಯ ನಿರ್ವಹಿಸುವುದರಿಂದ ಅಂತಹ ಸಿಬ್ಬಂದಿಗಳಿಗೆ ವಾರದ ರಜೆಯ ಬದಲಿಗೆ ರೂ. 50/–ಗಳ ಭತ್ಯೆಯನ್ನು ಓದಲಾದ (1)ರ ಸರ್ಕಾರದ ಆದೇಶದಲ್ಲಿ ನೀಡಲಾಗುತ್ತಿದೆ. 2010–11ರ ಸಾಲಿನ ರಾಜ್ಯ ಆಯವ್ಯಯ ಭಾಷಣದಲ್ಲಿ ಈ ಮೊತ್ತವನ್ನು ರೂ. 100/–ಗಳಿಗೆ ಹೆಚ್ಚಿಸಲು ಘೋಷಿಸಲಾಗಿದೆ. ಅದರಂತೆ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಓದಲಾದ (2)ರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 45 ಪೊಸಿಇ 2010, ಬೆಂಗಳೂರು, ದಿನಾಂಕ : 19-6-2010**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಪೊಲೀಸ್ ಇಲಾಖೆಯಲ್ಲಿ ವಾರದ ರಜೆಯ ದಿನ ಕರ್ತವ್ಯ ನಿರ್ವಹಿಸುವ ಪೊಲೀಸ್ ಕಾನ್ಸ್‌ಟೇಬಲ್ ಮತ್ತು ಪೊಲೀಸ್ ಹೆಡ್ ಕಾನ್ಸ್‌ಟೇಬಲ್ ಗಳಿಗೆ ಮಾತ್ರ ವಾರದ ರಜೆಯ ಬದಲಿಗೆ ನೀಡುವ ವಾರದ ಭತ್ಯೆಯನ್ನು ರೂ. 50/- ರಿಂದ ರೂ. 100/- (ಒಂದು ನೂರು ರೂ.ಗಳು ಮಾತ್ರ) ಗಳಿಗೆ ಹೆಚ್ಚಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿ ಆದೇಶಿಸಿದೆ.

ಈ ಆದೇಶ ಹೊರಡಿಸಿದ ದಿನಾಂಕದಿಂದ ಪರಿಷ್ಕೃತ ದರ ಜಾರಿಗೆ ಬರುತ್ತದೆ ಹಾಗೂ ಇದಕ್ಕೆ ತಗಲುವ ಹೆಚ್ಚುವರಿ ವೆಚ್ಚವನ್ನು ಇಲಾಖೆಗೆ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದೆಂಬ ಷರತ್ತಿಗೊಳಪಟ್ಟಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 690 ಸೇ-1 2010, ದಿನಾಂಕ : 5-6-2010ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಟಿ.ಎನ್. ರವಿಪ್ರಕಾಶ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1888

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** 2010-11 ನೇ ಸಾಲಿನಲ್ಲಿ ರಾಜ್ಯದಲ್ಲಿ ವೃಕ್ಷಾರೋಪಣ ಅಭಿಯಾನ (ವೃಕ್ಷ ಲಕ್ಷ) ಕಾರ್ಯಕ್ರಮ ಕೈಗೊಳ್ಳುವ ಕುರಿತು.

**ಓದಲಾಗಿದೆ :** ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅಭಿವೃದ್ಧಿ), ಇವರ ಪತ್ರ ಸಂ. ಬಿ1/ಬಿಯುಡಿ/ವೃ.ಲ.ಅ./ಜಿ.ಎಲ್-5/10-11, ದಿನಾಂಕ : 24-5-2010.

**ಪ್ರಸ್ತಾವನೆ :**

ಮೇಲೆ ಓದಲಾದ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅಭಿವೃದ್ಧಿ) ಇವರ ದಿನಾಂಕ : 24-5-2010ರ ಪತ್ರದಲ್ಲಿ 2009-10ನೇ ಸಾಲಿನಲ್ಲಿ ಆಚರಿಸಿದಂತೆ 2010-11ನೇ ಸಾಲಿನಲ್ಲಿಯೂ ಸಹ ರಾಜ್ಯದ ಎಲ್ಲಾ ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾ ವ್ಯಾಪ್ತಿಯಲ್ಲಿ ಬೃಹತ್ ಪ್ರಮಾಣದ ವೃಕ್ಷಾರೋಪಣ ಅಭಿಯಾನ ಕೈಗೊಳ್ಳಲು ಮಾನ್ಯ ಮುಖ್ಯಮಂತ್ರಿಗಳು ಸೂಚನೆ ನೀಡಿರುವುದಾಗಿ ತಿಳಿಸಿರುತ್ತಾರೆ. ಈ ದಿಸೆಯಲ್ಲಿ ಬರುವ ಜೂನ್ 2010 ಮತ್ತು ಜುಲೈ 2010ರ ಅವಧಿಯಲ್ಲಿ ಈ ಕಾರ್ಯಕ್ರಮವನ್ನು ಸಮಗ್ರವಾಗಿ ರಾಜ್ಯಾದ್ಯಂತ ಹಮ್ಮಿಕೊಳ್ಳಲು ಉದ್ದೇಶಿಸಲಾಗಿದೆ.

ಈ ಕಾರ್ಯಕ್ರಮಕ್ಕಾಗಿ ಶಾಲಾ ಕಾಲೇಜುಗಳ ಆವರಣ, ಗೋಮಾಳ, ಸಂಘ ಸಂಸ್ಥೆಗಳ ಸ್ಥಳ, ಖಾಸಗಿ ಜಮೀನು, ವಿವಿಧ ಇಲಾಖಾ ಕಛೇರಿಗಳ ಆವರಣ, ಬೀಳು ಪ್ರದೇಶ, ರಸ್ತೆ ಬದಿ, ಕೆರೆ ಅಂಗಳ, ನಗರದ ರುದ್ರಭೂಮಿ, ದೇವರಕಾಡು ಮುಂತಾದ ಪ್ರದೇಶಗಳಲ್ಲಿ ಬೃಹತ್ ಪ್ರಮಾಣದಲ್ಲಿ ವೃಕ್ಷಾರೊಪಣ ಕಾರ್ಯಕ್ರಮಕ್ಕೆ ಚಾಲನೆ ನೀಡಲು ಸಜ್ಜುಗೊಳಿಸಬೇಕಾಗಿದೆ. ಆದ್ದರಿಂದ, ಅಂತಹ ಪ್ರದೇಶಗಳನ್ನು ಕೂಡಲೇ ಗುರುತಿಸಿ ಇಲಾಖೆಯಲ್ಲಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳು ಮತ್ತು ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗಳಡಿಯಲ್ಲಿ ಸಸಿ ನೆಡಲು ಹಾಗೂ ಸಸಿಗಳನ್ನು ಬೆಳೆಸಲು ಕ್ರಮ ಕೈಗೊಳ್ಳುವಂತೆ ತಯಾರಿ ಮಾಡಿಕೊಳ್ಳಲು ರಾಜ್ಯದ ಅರಣ್ಯ ಇಲಾಖೆಯ ಎಲ್ಲಾ ಘಟಕಾಧಿಕಾರಿಗಳಿಗೆ ಈಗಾಗಲೇ ಸೂಚನೆ ನೀಡಲಾಗಿದೆ.

ಈ ಕಾರ್ಯಕ್ರಮಕ್ಕೆ ಮಾನ್ಯ ಮುಖ್ಯಮಂತ್ರಿಗಳು, ಜಿಲ್ಲಾ ಉಸ್ತುವಾರಿ ಸಚಿವರು, ಶಾಸಕರು, ವಿಧಾನ ಪರಿಷತ್ ಸದಸ್ಯರು, ಲೋಕಸಭಾ ಸದಸ್ಯರು, ಪಶ್ಚಿಮ ಘಟ್ಟ ಕಾರ್ಯಪಡೆ ಹಾಗೂ ಜೈವಿಕ ಇಂಧನ ಕಾರ್ಯಪಡೆಯ ಅಧ್ಯಕ್ಷರು ಮತ್ತು ಸದಸ್ಯರು, ಜಿಲ್ಲಾ ಪಂಚಾಯತ್ ಅಧ್ಯಕ್ಷರು ಮತ್ತು ಜನ ಪ್ರತಿನಿಧಿಗಳನ್ನು ಆಹ್ವಾನಿಸಿ ಉದ್ಘಾಟಿಸಲು ಉದ್ದೇಶಿಸಲಾಗಿದೆ. ಹಾಗೆಯೇ ಶಿಕ್ಷಣ ಸಂಸ್ಥೆಗಳು, ವಿದ್ಯಾರ್ಥಿಗಳು, ಶಿಕ್ಷಕರು, ವಕೀಲರು, ಸಂಘಸಂಸ್ಥೆಗಳ ಪ್ರತಿನಿಧಿಗಳು, ವಿವಿಧ ಇಲಾಖಾ ಅಧಿಕಾರಿಗಳು, ಸಾರ್ವಜನಿಕರು, Legal Authority Cell, Karnataka High Court ಮತ್ತು ಸ್ಥಳೀಯ ನ್ಯಾಯಾಲಯಗಳ ಮುಖ್ಯಸ್ಥರು ಹಾಗೂ ವಕೀಲರ ಸಂಘ ಎನ್.ಎಸ್.ಎಸ್, ಎನ್‌ಸಿಸಿ ಘಟಕಗಳು ಸ್ವಸಹಾಯ ಗುಂಪುಗಳು, ಗ್ರಾಮ ಅರಣ್ಯ ಸಮಿತಿಗಳು, ದೇವಸ್ಥಾನ ಆಡಳಿತ ಮಂಡಳಿಗಳು, ಮಹಿಳಾ ಮಂಡಳಿಗಳು, ಮಠಾಧೀಶರು ಹಾಗೂ ಇತರೆ ಚುನಾಯಿತ ಪ್ರತಿನಿಧಿಗಳನ್ನು ಸೇರಿಸಿಕೊಂಡು ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಬೇಕಾಗುತ್ತದೆ. ಇದಕ್ಕಾಗಿ ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಒಂದು ಸಮಿತಿಯನ್ನು ರಚಿಸಿ ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಆಯಾಯ ಜಿಲ್ಲೆಯ ಪ್ರಾದೇಶಿಕ/ಸಾಮಾಜಿಕ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಸದಸ್ಯ ಕಾರ್ಯದರ್ಶಿಯಾಗಿ ಈ ಕಾರ್ಯಕ್ರಮವನ್ನು ಅತ್ಯಂತ ಯಶಸ್ವಿಗೊಳಿಸಲು ಸಾಧ್ಯವಿದೆ. ಆದ್ದರಿಂದ, ವೃಕ್ಷ ಲಕ್ಷ ಅನುಷ್ಠಾನ ಸಮಿತಿಯನ್ನು ರಚಿಸಿ ಶೀಘ್ರ ಆದೇಶ ನೀಡಬೇಕೆಂದು ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅಭಿವೃದ್ಧಿ) ರವರು ಕೋರಿರುತ್ತಾರೆ.

ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದ ಪ್ರತಿಯೊಂದು ಜಿಲ್ಲೆಯಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ವೃಕ್ಷ ಲಕ್ಷ ಅಭಿಯಾನ ಅನುಷ್ಠಾನ ಸಮಿತಿಗಳನ್ನು ರಚಿಸಲು ಸರ್ಕಾರ ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಅಪಜೀ 139 ಎಫ್‌ಎಪಿ 2010, ಬೆಂಗಳೂರು, ದಿನಾಂಕ : 14-7-2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, 2010-11ನೇ ಸಾಲಿನಲ್ಲಿ ರಾಜ್ಯದಲ್ಲಿ ವೃಕ್ಷಾರೋಪಣ ಅಭಿಯಾನ (ವೃಕ್ಷ ಲಕ್ಷ) ಕಾರ್ಯಕ್ರಮದ ಯಶಸ್ವಿ ಅನುಷ್ಠಾನಕ್ಕಾಗಿ ರಾಜ್ಯದ ಪ್ರತಿಯೊಂದು ಜಿಲ್ಲೆಯಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಈ ಕೆಳಕಂಡಂತೆ ವೃಕ್ಷಾರೋಪಣ ಅಭಿಯಾನ ಅನುಷ್ಠಾನ ಸಮಿತಿಗಳನ್ನು ರಚಿಸಲು ಸರ್ಕಾರದ ಮಂಜೂರಾತಿ ನೀಡಿದೆ.

| | | |
|---|---|---|
| 1 | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2 | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ | ಸದಸ್ಯರು |
| 3 | ಜಂಟಿ ನಿರ್ದೇಶಕರು, ಕೃಷಿ ಇಲಾಖೆ | ಸದಸ್ಯರು |

| | | |
|---|---|---|
| 4 | ಜಿಲ್ಲಾ ಜಲಾನಯನ ಅಭಿವೃದ್ಧಿ ಇಲಾಖಾಧಿಕಾರಿ | ಸದಸ್ಯರು |
| 5 | ಉಪ ನಿರ್ದೇಶಕರು ತೋಟಗಾರಿಕೆ ಇಲಾಖೆ | ಸದಸ್ಯರು |
| 6 | ಉಪ ನಿರ್ದೇಶಕರು, ರೇಷ್ಮೆ ಇಲಾಖೆ | ಸದಸ್ಯರು |
| 7 | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಕಲ್ಯಾಣಾಭಿವೃದ್ಧಿ ಇಲಾಖೆ | ಸದಸ್ಯರು |
| 8 | ಉಪ ನಿರ್ದೇಶಕರು, ಪಶುಸಂಗೋಪನಾ ಇಲಾಖೆ | ಸದಸ್ಯರು |
| 9 | ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ | ಸದಸ್ಯರು |
| 10 | ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ | ಸದಸ್ಯರು |
| 11 | ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ | ಸದಸ್ಯರು |
| 12 | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 13 | ಅಧೀಕ್ಷಕ ಅಭಿಯಂತರು/ಕಾರ್ಯನಿರ್ವಾಹಕ ಅಭಿಯಂತರು ಲೋಕೋಪಯೋಗಿ ಇಲಾಖೆ | ಸದಸ್ಯರು |
| 14 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ | ಸದಸ್ಯರು |
| 15 | ಸಂಬಂಧಿಸಿದ ತಹಸೀಲ್ದಾರರು | ಸದಸ್ಯರು |
| 16 | ಸಂಬಂಧಿಸಿದ ತಾಲ್ಲೂಕು ಪಂಚಾಯಿತ್ ಕಾರ್ಯ ನಿರ್ವಹಣಾಧಿಕಾರಿ | ಸದಸ್ಯರು |
| 17 | ಸಂಬಂಧಪಟ್ಟ ಜಿಲ್ಲೆಗಳ ವಿಧಾನ ಸಭೆ ಮತ್ತು ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 18 | ಉಪ ಅರಣ್ಯ ಸಂರಕ್ಷಣಾಧಿಕಾರಿ (ಪ್ರಾದೇಶಿಕ ಹಾಗೂ ಜಿಲ್ಲಾ ಕೇಂದ್ರ ಸ್ಥಾನ) | ಸದಸ್ಯರು |
| 19 | ವಕೀಲರ ಸಂಘದ ಪ್ರತಿನಿಧಿಗಳು | ಸದಸ್ಯರು |
| 20 | ಜಿಲ್ಲಾ ಐಜರಿಚಿಟ ಅಜಟಟ ಂಣಣುಂಡುಣಥಿ, ಪ್ರತಿನಿಧಿಗಳು | ಕಾರ್ಯದರ್ಶಿ |

ಚುನಾಯಿತ ಪ್ರತಿನಿಧಿಗಳು

| | | |
|---|---|---|
| 1 | ಯೋಜನಾ ವ್ಯಾಪ್ತಿಯ ಗ್ರಾಮ ಅರಣ್ಯ ಸಮಿತಿ ಅಧ್ಯಕ್ಷರು | ಸದಸ್ಯರು |
| 2 | ಯೋಜನಾ ವ್ಯಾಪ್ತಿಯ ಜಿಲ್ಲಾ ಪಂಚಾಯಿತಿ ಸದಸ್ಯರು | ಸದಸ್ಯರು |
| 3 | ಯೋಜನಾ ವ್ಯಾಪ್ತಿಯ ತಾಲ್ಲೂಕು ಪಂಚಾಯಿತಿ ಸದಸ್ಯರು | ಸದಸ್ಯರು |
| 4 | ಯೋಜನಾ ವ್ಯಾಪ್ತಿಯ ಗ್ರಾಮ ಪಂಚಾಯಿತಿ ಅಧ್ಯಕ್ಷರು | ಸದಸ್ಯರು |
| 5 | ಯೋಜನಾ ವ್ಯಾಪ್ತಿಯ ಸರ್ಕಾರೇತರ ಸಂಸ್ಥೆ ಪ್ರತಿನಿಧಿ | ಸದಸ್ಯರು |
| 6 | ಆಯಾಯ ಜಿಲ್ಲಾ ವ್ಯಾಪ್ತಿಯ ಪಶ್ಚಿಮ ಘಟ್ಟ ಕಾರ್ಯಪಡೆ ಹಾಗೂ ಜೈವಿಕ ಮತ್ತು ಇಂಧನ ಕಾರ್ಯಪಡೆಯ ಸದಸ್ಯರು | ಸದಸ್ಯರು |
| 7 | ಮಹಿಳಾ ಸಮಾಜ, ಸ್ವಸಹಾಯಕ ಗುಂಪು ಸದಸ್ಯರು | ಸದಸ್ಯರು |
| 8 | ರಾಷ್ಟ್ರೀಯ ಸೇವಾ ಯೋಜನೆ/ಓ.ಅ.ಅ. | ಸದಸ್ಯರು |
| 9 | ಗ್ರಾಮ ಅರಣ್ಯ ಸಮಿತಿಯ ಸದಸ್ಯರು | ಸದಸ್ಯರು |

ವೃಕ್ಷಾರೋಪಣ ಅನುಷ್ಠಾನ ಸಮಿತಿಗಳ ರಚನೆ ಹಾಗೂ ಕಾರ್ಯಕ್ರಮದ ಯಶಸ್ವಿ ಅನುಷ್ಠಾನಕ್ಕೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಅಗತ್ಯ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಮಾನ್ಯ ಮುಖ್ಯ ಮಂತ್ರಿಗಳ ಅನುಮೋದನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಪಿ.ಆರ್. ಕಲಾವತಿ)**

ಪಿ.ಆರ್. 1889

ಸರ್ಕಾರದ ಅಧೀನ ಕಾರ್ಯದರ್ಶಿ

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎ.ಎಂ. ಗೌಣಿ, ನಿವೃತ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಹಾಗೂ ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿಯನ್ನು ಬದಲಾಯಿಸಿ ನೇಮಿಸುವ ಬಗ್ಗೆ ಆದೇಶ.

**ಓದಲಾಗಿದೆ :**
1. ದಿನಾಂಕ : 21–3–07 ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 056 ಎಸ್ಇಎನ್ 98
2. ದಿನಾಂಕ : 3–5–07ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 056 ಎಸ್ಇಎನ್ 98
3. ಶ್ರೀ ಎ.ಎಂ. ಗೌಣಿ, ನಿವೃತ್ತ, ಕೆಎಎಸ್ (ಕಿರಿಯ ಶ್ರೇಣಿ) ಇವರಿಗೆ ಸಂಬಂಧಿಸಿದಂತೆ ವಿಚಾರಣಾಧಿಕಾರಿಗಳು ಸಲ್ಲಿಸಿದ ದಿನಾಂಕ : 27–10–07ರ ವಿಚಾರಣಾ ವರದಿ.
4. ದಿನಾಂಕ : 21–11–07 ರ ಸರ್ಕಾರದ ಪತ್ರ ಸಂಖ್ಯೆ : ಸಿಆಸುಇ 014 ಕೆಇವಿ 07
5. ದಿನಾಂಕ : 11–1–10ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 014 ಕೆಇವಿ 07
6. ಪ್ರಕರಣ ಸಂಖ್ಯೆ : ಅಖಿಂ326/09 ರಲ್ಲಿ ಮಾನ್ಯ ಕೆಎಟಿಯ ದಿನಾಂಕ : 18–6–10ರ ನಡವಳಿ.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕು ಕಛೇರಿಯಲ್ಲಿ ಈ ಹಿಂದೆ ಶ್ರೀ ಎ.ಎಂ. ಗೌಣಿ ಮತ್ತು ಶ್ರೀ ಜೆ. ತಿಮ್ಮಯ್ಯ, ನಿವೃತ್ತ ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿಗಳು ತಹಶೀಲ್ದಾರರ ಹುದ್ದೆಯಲ್ಲಿ ಶ್ರೀ ಓಬಣ್ಣ ಮತ್ತು ಶ್ರೀ ಎನ್. ಶರಣಪ್ಪ, ಕಂದಾಯ ನಿರೀಕ್ಷಕರ ಹುದ್ದೆಯಲ್ಲಿ ಶ್ರೀ ಎನ್.ಕೆ. ರಂಗಯ್ಯ, ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿ ಶ್ರೀ ಶ್ರೀನಿವಾಸಾಚಾರಿ

ಮತ್ತು ಶ್ರೀ ವಸಂತಮಾಧವ, ಗ್ರಾಮ ಲೆಕ್ಕಿಗರ ಹುದ್ದೆಯಲ್ಲಿ ಮತ್ತು ಶ್ರೀ ಡಿ. ವೆಂಕಟೇಶ, ದ್ವಿತೀಯ ದರ್ಜೆ ಸಹಾಯಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, 1981-82 ನೇ ಸಾಲಿನಲ್ಲಿ ಸರ್ಕಾರಿ ಜಮೀನುಗಳನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳನ್ನು ಉಲ್ಲಂಘಿಸಿ ಮಂಜೂರು ಮಾಡಿರುವ ಆರೋಪದ ಮೇಲೆ ಇವರುಗಳಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 11 ರಡಿ ದೋಷಾರೋಪಣೆಗಳನ್ನೊಳಗೊಂಡ ನೋಟೀಸನ್ನು ಜಾರಿ ಮಾಡುವ ಮೂಲಕ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಗಿದ್ದು, ಶ್ರೀ ಎನ್. ಶರಣಪ್ಪ ಮತ್ತು ಶ್ರೀ ಎಂ.ಕೆ. ರಂಗಯ್ಯ ರವರುಗಳನ್ನು ಹೊರತುಪಡಿಸಿ, ಇತರೆ ಆಪಾದಿತರು ನೋಟೀಸಿಗೆ ಸಲ್ಲಿಸಿದ ಲಿಖಿತ ಸಮಜಾಯಿಷಿಯಲ್ಲಿ ಆರೋಪಗಳಿಗೆ ಪೂರಕವಾದ ಯಾವುದೇ ದಾಖಲೆಗಳನ್ನು ಸಲ್ಲಿಸದಿರುವುದು ಮತ್ತು ಇವರುಗಳು ಕರ್ತವ್ಯ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನದಿಂದ ಕಾರ್ಯನಿರ್ವಹಿಸಿರುವುದು ಮೇಲ್ನೋಟಕ್ಕೆ ಕಂಡುಬಂದ ಕಾರಣ ಇವರುಗಳ ವಿರುದ್ಧದ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡು ಹಿಡಿಯುವ ದೃಷ್ಟಿಯಿಂದ ಇವರುಗಳ ವಿರುದ್ಧ ಜಂಟೀ ಇಲಾಖಾ ವಿಚಾರಣೆಯನ್ನು ಮುಂದುವರಿಸಲು ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ಜಂಟೀ ಇಲಾಖಾ ವಿಚಾರಣೆಯನ್ನು ನಡೆಸಿ ವರದಿ ಸಲ್ಲಿಸಲು ಶ್ರೀ ಡಬ್ಲ್ಯು. ಅನ್ಸಾರಿ, ನಿವೃತ್ತ ಜಿಲ್ಲಾ ಹಾಗೂ ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ತಹಶೀಲ್ದಾರ್, ಗಂಗಾವತಿ ತಾಲ್ಲೂಕು, ಗಂಗಾವತಿ, ಕೊಪ್ಪಳ ಜಿಲ್ಲೆರವರನ್ನು ಶಿಸ್ತು ಪ್ರಾಧಿಕಾರಿಯ ಪರವಾಗಿ ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ, ಆರೋಪಿತರ ಪೈಕಿ ಪ್ರಮುಖ ಆರೋಪಿಯಾದ ಶ್ರೀ ಎ.ಎಂ. ಗೌಣಿ, ನಿವೃತ್ತ ಕೆಎಎಸ್ (ಕಿರಿಯ ಶ್ರೇಣಿ) ಇವರಿಗೆ ಸಂಬಂಧಿಸಿದಂತೆ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ಇದು ಜಂಟೀ ಇಲಾಖಾ ವಿಚಾರಣೆಯಾಗಿದ್ದು, ಒಬ್ಬ ಆರೋಪಿತರ ಬಗ್ಗೆ ಮಾತ್ರ ಸಲ್ಲಿಸಲಾದ ವಿಚಾರಣಾ ವರದಿಯನ್ನು ಪರಿಗಣಿಸುವಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11 ರೊಂದಿಗೆ ಓದಿಕೊಂಡಂತೆ ನಿಯಮ 13ರ ಉಲ್ಲಂಘನೆಯಾಗುವ ಕಾರಣ, ಸಲ್ಲಿಸಲಾಗಿರುವ ವಿಚಾರಣಾ ವರದಿಯು ಅಪೂರ್ಣವೆಂದು ಪರಿಗಣಿಸಿ, ಎಲ್ಲ ಆರೋಪಿತರು ಒಳಗೊಂಡಂತೆ ಸಂಪೂರ್ಣ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಸೂಚಿಸುತ್ತಾ, ಮೇಲೆ ಕ್ರಮ ಸಂಖ್ಯೆ (4) ರಲ್ಲಿನ ಪತ್ರದೊಂದಿಗೆ ವಿಚಾರಣಾ ವರದಿಯನ್ನು ವಿಚಾರಣಾಧಿಕಾರಿಗಳಿಗೆ ಹಿಂದಿರುಗಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಎನ್. ಶರಣಪ್ಪ, ನಿವೃತ್ತ ಕಂದಾಯ ನಿರೀಕ್ಷಕರು ಮತ್ತು ಶ್ರೀ ಎನ್.ಕೆ. ರಂಗಯ್ಯ, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ತಹಶೀಲ್ದಾರರ ಕಛೇರಿ, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ ರವರುಗಳನ್ನು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಆದೇಶಿಸಿರುವ ಜಂಟೀ ಇಲಾಖಾ ವಿಚಾರಣೆಯಿಂದ ಕೈಬಿಡಲಾಗಿದೆ.

ವಿಚಾರಣಾಧಿಕಾರಿಗಳು ಸಂಪೂರ್ಣ ವಿಚಾರಣಾ ವರದಿಯನ್ನು ಸಲ್ಲಿಸುವಲ್ಲಿ ವಿಫಲರಾದ ಕಾರಣ, ಈ ಪ್ರಕರಣದಲ್ಲಿ ಯಾವುದೇ ನಿರ್ಣಯವನ್ನು ಕೈಗೊಳ್ಳಲು ಸರ್ಕಾರಕ್ಕೆ ಸಾಧ್ಯವಾಗದಿರುವುದನ್ನು ಪ್ರಶ್ನಿಸಿ ಶ್ರೀ ಗೌಣಿರವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ದಾಖಲಿಸಿದ ಅರ್ಜಿಯ ವಿಚಾರಣೆಯಲ್ಲಿ, ಪ್ರಕರಣದ ಬಗ್ಗೆ ಆರು ತಿಂಗಳ ಒಳಗಾಗಿ ತನ್ನ ಅಂತಿಮ ಆದೇಶವನ್ನು ಹೊರಡಿಸುವಂತೆ ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ : 1091/2009 ರಲ್ಲಿ ದಿನಾಂಕ : 11-3-09 ರಂದು ಸರ್ಕಾರಕ್ಕೆ ಆದೇಶಿಸಿರುತ್ತದೆ ಹಲವಾರು ಪ್ರಯತ್ನಗಳ ನಂತರವೂ ಮತ್ತು ಸದರಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ದಾಖಲಿಸಲಾದ ಅರ್ಜಿಯಲ್ಲಿ ಒಬ್ಬ ಪ್ರತಿವಾದಿಯಾಗಿದ್ದರೂ ವಿಚಾರಣಾಧಿಕಾರಿಯಾದ ಶ್ರೀ ಅನ್ಸಾರಿ ರವರು ಸಂಪೂರ್ಣ ವಿಚಾರಣಾ ವರದಿಯನ್ನು ಸಲ್ಲಿಸದ ಕಾರಣ, ಶ್ರೀ ಗೌಣಿ ರವರು ನ್ಯಾಯಾಂಗ ನಿಂದನಾ ಅರ್ಜಿಯನ್ನು ದಾಖಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ನ್ಯಾಯಾಂಗ ನಿಂದನಾ ಅರ್ಜಿಯಲ್ಲಿ ಮಾನ್ಯ ಕೆಎಟಿ ಯ ನಡವಳಿಯಲ್ಲಿ ಪ್ರತಿವಾದಿಗಳ ಪೈಕಿ ಒಬ್ಬರಾದ ವಿಚಾರಣಾಧಿಕಾರಿ ಶ್ರೀ ಅನ್ಸಾರಿ ರವರು ಮಾನ್ಯ ನ್ಯಾಯಾಲಯದ ಮುಂದೆ ಹಾಜರಾಗಿ, ಈ ಇಲಾಖಾ ವಿಚಾರಣಾ ಪ್ರಕ್ರಿಯೆಯಿಂದ ಹಿಂದೆ ಸರಿದಿರುವುದಾಗಿ ತಿಳಿಸಿರುವುದನ್ನು ಮತ್ತು ಮೇಲೆ ವಿವರಿಸಿರುವ ವಿದ್ಯಮಾನಗಳನ್ನು ಸರ್ಕಾರವು ತೀವ್ರವಾಗಿ ಗಮನಿಸಿ, ಇಲಾಖಾ ವಿಚಾರಣಾ ಪ್ರಕ್ರಿಯೆಯಲ್ಲಿ ಆಗುತ್ತಿರುವ ವಿಳಂಭವನ್ನು ತಪ್ಪಿಸಲು, ಜಂಟೀ ವಿಚಾರಣಾ ಪ್ರಕ್ರಿಯೆಯನ್ನು ಪ್ರಾರಂಭಿಕ ಹಂತದಿಂದ ಪ್ರಾರಂಭಿಸಿ, ವಿಚಾರಣಾ ವರದಿಯನ್ನು ತ್ವರಿತವಾಗಿ ಪಡೆಯಲು ಶ್ರೀ ಅನ್ಸಾರಿ ರವರ ಬದಲಿಗೆ ಬೇರೆ ವಿಚಾರಣಾಧಿಕಾರಿಯನ್ನು ನೇಮಿಸುವ ಕುರಿತು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 014 ಕೆಇವಿ 07, ಬೆಂಗಳೂರು, ದಿನಾಂಕ : 9ನೇ ಜುಲೈ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅದೇ ನಿಯಮಾವಳಿಯ ನಿಯಮ 13 ರಡಿ ಸರ್ಕಾರವು ಶ್ರೀ ಡಬ್ಲ್ಯು. ಅನ್ಸಾರಿ, ನಿವೃತ್ತ ಜಿಲ್ಲಾ ಹಾಗೂ ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಇವರ ಬದಲಿಗೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯಿತಿ, ಕೊಪ್ಪಳ ಜಿಲ್ಲೆ, ಕೊಪ್ಪಳ ಇವರನ್ನು ಪ್ರಸ್ತಾವನೆಯಲ್ಲಿನ ಆರೋಪಿತ ಅಧಿಕಾರಿ/ನೌಕರರ ವಿರುದ್ಧ ಪ್ರಾರಂಭಿಕ ಹಂತದಿಂದ De-Nova ಜಂಟೀ ವಿಚಾರಣಾ ಪ್ರಕ್ರಿಯೆ ನಡೆಸಿ, ವಿಚಾರಣಾ ವರದಿಯನ್ನು ಜರೂರಾಗಿ ಸಲ್ಲಿಸಲು ವಿಚಾರಣಾಧಿಕಾರಿಯಾಗಿ ಈ ಮೂಲಕ ನೇಮಿಸಿದೆ.

ತಹಶೀಲ್ದಾರ್, ಗಂಗಾವತಿ ತಾಲ್ಲೂಕು, ಗಂಗಾವತಿ, ಕೊಪ್ಪಳ ಜಿಲ್ಲೆ ಇವರು ಮಂಡನಾಧಿಕಾರಿಯಾಗಿ ಮುಂದುವರಿಯುವರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಎಂ. ವಾಸುದೇವಮೂರ್ತಿ)**

ಪಿ.ಆರ್. 1890

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸು ಇಲಾಖೆ (ಸೇವೆಗಳು-2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಮಾನ್ಯ ಶಾಸಕರುಗಳ ಆಪ್ತ ಸಹಾಯಕರ ನೇಮಕಾತಿ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸುವ ಬಗ್ಗೆ

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 177 ಆಹಿಸೇ 2009 ದಿನಾಂಕ 23.02.2010

2. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 544 ಆಹಿಸೇ 2008 ದಿನಾಂಕ 29–01–2009

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಗ್ರೂಪ್ ಸಿ ವೃಂದದಲ್ಲಿ ಪ್ರಥಮ ದರ್ಜೆ ಸಹಾಯಕರ/ದ್ವಿತೀಯ ದರ್ಜೆ ಸಹಾಯಕರು/ಶೀಘ್ರಲಿಪಿಗಾರರಿಗೆ ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳನ್ನು ಮಾತ್ರ ಅವರ ವಿದ್ಯಾರ್ಹತೆಯನುಸಾರ ಕಂದಾಯ ಇಲಾಖೆಯಲ್ಲಿ ಮಂಜೂರಾಗಿರುವ ಪ್ರಥಮ ದರ್ಜೆ ಸಹಾಯಕರ/ದ್ವಿತೀಯ ದರ್ಜೆ ಸಹಾಯಕರ/ಶೀಘ್ರಲಿಪಿಗಾರರ ಹುದ್ದೆಗಳಿಗೆದುರಾಗಿ ಗುತ್ತಿಗೆ ಆಧಾರದ ಮೇಲೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15(1)(ಬಿ)(vii) ರನ್ವಯ ಮಾನ್ಯ ಶಾಸಕರ ಆಪ್ತ ಸಹಾಯಕರಾಗಿ ಸರ್ಕಾರದಿಂದ ಅನುಮೋದಿಸಲ್ಪಟ್ಟ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ನೇಮಿಸಲು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಅವಕಾಶ ನೀಡಲಾಗಿದೆ. ಮೇಲೆ ಓದಲಾದ (2)ರ ಅಧಿಕೃತ ಜ್ಞಾಪನದಲ್ಲಿ ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯ, ಸಚಿವರ ಆಪ್ತ ಶಾಖೆ, ವಿಧಾನ ಪರಿಷತ್ತು/ಸಭೆ; ರಾಜ್ಯ ಸಭೆ/ ಲೋಕ ಸಭೆ ಸದಸ್ಯರ ಆಪ್ತ ಸಿಬ್ಬಂದಿ ಶಾಖೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ನೌಕರರ ಸಂಚಿತ ವೇತನವನ್ನು ನಿಗದಿಪಡಿಸಲಾಗಿದೆ. ಗುತ್ತಿಗೆ ಆಧಾರದ ಮೇಲೆ ನೇಮಕಗೊಳ್ಳುವ ಮಾನ್ಯ ಶಾಸಕರ ಆಪ್ತ ಸಹಾಯಕರ ನೇಮಕಾತಿ ಷರತ್ತು ಮತ್ತು ನಿಬಂಧನೆಗಳನ್ನು ಆಡಳಿತದ ಹಿತದೃಷ್ಟಿಯಿಂದ ಸಂಬಂಧಪಟ್ಟ ಜಿಲ್ಲಾಧಿಕಾರಿಗಳೇ ಹೊರಡಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 123 ಆಹಿಸೇ 2010, ಬೆಂಗಳೂರು, ದಿನಾಂಕ 21–05–2010**

ಸೂಕ್ತ ಪರಿಶೀಲನೆಯ ನಂತರ ಗ್ರೂಪ್ ಸಿ ವೃಂದದಲ್ಲಿ ಗುತ್ತಿಗೆ ಆಧಾರದ ಮೇಲೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15(1)(ಬಿ)(vii) ರನ್ವಯ ಮಾನ್ಯ ಶಾಸಕರ ಆಪ್ತ ಸಹಾಯಕರಾಗಿ ನೇಮಕಗೊಂಡಿರುವ ನೌಕರರ ನೇಮಕಾತಿ ಷರತ್ತು ಮತ್ತು ನಿಬಂಧನೆಗಳನ್ನು ಅನುಬಂಧದಲ್ಲಿರುವಂತೆ ನೇಮಕ ಮಾಡಿರುವ ಹುದ್ದೆಗೆ ನಿಗದಿಪಡಿಸಿರುವ ಸಂಚಿತ ವೇತನದಲ್ಲಿ ಆದೇಶ ಹೊರಡಿಸಲು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಅವಕಾಶ ನೀಡಿದೆ.

ಮಾನ್ಯ ಶಾಸಕರ ಆಪ್ತ ಸಹಾಯಕರಾಗಿ ನೇಮಕಗೊಳ್ಳುವ ನಿಗಮ: ಮಂಡಳಿ ಸ್ಥಳೀಯ ಸಂಸ್ಥೆಗಳು: ಸ್ವಾಯತ್ತ: ಶಾಸನಬದ್ಧ ಸಂಸ್ಥೆಗಳ ಗ್ರೂಪ್ ಸಿ ನೌಕರರ ನೇಮಕಾತಿ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸಲು ಪ್ರಸ್ತಾವನೆಯನ್ನು ಪ್ರತ್ಯೇಕವಾಗಿ ಸರ್ಕಾರಕ್ಕೆ ಕಳುಹಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುಕ್ಮಿಣಿ ದಿವಾಕರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,

(ಆಡಳಿತ–1)

## ಅನುಬಂಧ

### ಗುತ್ತಿಗೆ ನೇಮಕಾತಿಯ ನಿಬಂಧನೆ ಹಾಗೂ ಷರತ್ತುಗಳು

1. ......................ಜಿಲ್ಲಾಧಿಕಾರಿಗಳ ಆದೇಶ ಸಂಖ್ಯೆ...........ದಿನಾಂಕ...................ರಲ್ಲಿ.........................ಹುದ್ದೆಯಲ್ಲಿ ಗುತ್ತಿಗೆ ಆಧಾರದ ಮೇರೆಗೆ ನೇಮಕ ಮಾಡಿರುವ ಶ್ರೀ/ಶ್ರೀಮತಿ.........................ಇವರ ಗುತ್ತಿಗೆ ನೇಮಕಾತಿಯ ಅವಧಿಯು ದಿನಾಂಕ....................ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಶ್ರೀ.......................ಮಾನ್ಯ ಶಾಸಕರು, .....................ವಿಧಾನಸಭಾ/ವಿಧಾನಪರಿಷತ್ತು ಕ್ಷೇತ್ರ, ಇವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಇವರ ಒಪ್ಪಂದದ ನೇಮಕಾತಿಗೆ ಕ್ರೋಢಿಕೃತ ಮಾಸಿಕ ಸಂಬಳ ರೂ. .............( .................... ರೂಪಾಯಿಗಳು ಮಾತ್ರ) ಗಳಿಗೆ ನಿಗದಿಪಡಿಸಲಾಗಿದೆ, ಇದಲ್ಲದೆ ಇನ್ನಿತರ ಯಾವುದೇ ಭತ್ಯೆಗಳಿಗೂ ಇವರು ಅರ್ಹರಾಗಿರುವುದಿಲ್ಲ.
3. ಇವರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರ ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಟ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಒಪ್ಪಂದದ ನೌಕರರು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆಯನ್ನು ಮಾತ್ರ ಪಡೆಯಲು ಅರ್ಹರಾಗಿರುತ್ತಾರೆ.
5. ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೆ ವೈದ್ಯಕೀಯ ಕಾರಣಗಳ ಮೇರೆಗಾಗಲಿ ಅಥವಾ ಬೇರೆ ಕಾರಣಗಳಿಂದಾಗಲೀ ಅನಧಿಕೃತ ಗೈರು ಹಾಜರಿಯಾದಲ್ಲಿ ಗುತ್ತಿಗೆ ಆಧಾರದ ನೇಮಕಾತಿಯು ತಾನಾಗಿಯೇ ರದ್ದಾಗುತ್ತದೆ.
6. ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆದು, ವೈದ್ಯಕೀಯ ಕಾರಣಗಳ ಮೇಲೆ ಅಥವಾ ಸಮರ್ಥನೀಯ ಕಾರಣಗಳ ಮೇರೆಗೆ ಗುತ್ತಿಗೆ ಆಧಾರದ ಅವಧಿಯಲ್ಲಿ ಮೂರು ತಿಂಗಳಿಗೆ ಮೀರದಂತೆ, ಗೈರು ಹಾಜರಾದಲ್ಲಿ ಆ ಕಾರಣದಿಂದ ಗುತ್ತಿಗೆ ನೇಮಕಾತಿ ರದ್ದಾಗುವುದಿಲ್ಲ. ಆದರೆ ಈ ಅವಧಿಯಲ್ಲಿ ಕರ್ತವ್ಯ ರಹಿತ ದಿನಗಳೆಂದು (ಡೈಸ್ ನಾನ್) ಪರಿಗಣಿಸಲಾಗುವುದು ಮತ್ತು ಅವರು ಈ ಅವಧಿಗೆ ಯಾವುದೇ ವೇತನ ಮತ್ತು ಇತರ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ.

7. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ, ವೇತನ, ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
8. ಸದರಿ ನೌಕರರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಭವಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
9. ಸದರಿ ಒಪ್ಪಂದದ ನೇಮಕಾತಿಯನ್ನು ಯಾವುದೇ ಕಾರಣಕ್ಕೂ ಖಾಯಂ ಎಂದು ಪರಿಗಣಿಸುವುದಿಲ್ಲ.
10. ಇವರು ತಮ್ಮ ಕರ್ತವ್ಯ, ಕಾರ್ಯ, ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ, ಮತ್ತು ಆಸಕ್ತಿಯಿಂದ ನಿರ್ವಹಿಸತಕ್ಕದ್ದು.
11. ಇವರು ತಮ್ಮ ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಲಭ್ಯವಾಗಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
12. ಇವರು 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಾಮಾವಳಿಗಳು ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಬದ್ಧರಾಗಿರತಕ್ಕದ್ದು.
13. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
14. ಇವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಸರ್ಕಾರಕ್ಕೆ ತುಂಬಿಕೊಡಲು ಹೊಣೆಯಾಗಿರುತ್ತಾರೆ.
15. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ 50 ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಒಪ್ಪಿಸತಕ್ಕದ್ದು.

**ರುಕ್ಮಿಣಿ ದಿವಾಕರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಆಡಳಿತ-1)

ಪಿ.ಆರ್. 1882

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೆಂಗಳೂರು ಉತ್ತರ(ಅಪರ) ತಾಲ್ಲೂಕು, ಜಾಲ ಹೋಬಳಿ, ಗಡೇನಹಳ್ಳಿ ಗ್ರಾಮದ ಸರ್ವೆ ನಂ. 22/61-62ಪಿ1 ರಲ್ಲಿ (1 ಎ), 22/64-65ಪಿ4(2ಎ), 22/62-63ಪಿ5(2 ಎ), 22/64-65ಪಿ8(2ಎ) ಒಟ್ಟು 7 ಎಕರೆ ವಿಸ್ತೀರ್ಣದ ಪ್ರದೇಶವನ್ನು ವ್ಯವಸಾಯ ವಲಯದಿಂದ ವಸತಿ ಉಪಯೋಗಕ್ಕೆ ಭೂ ಬದಲಾವಣೆ ಮಾಡುವ ಬಗ್ಗೆ.

**ಓದಲಾಗಿದೆ :**
1. ನಗರ ಮತ್ತು ಗ್ರಾಮಾಂತರ ಯೋಜನಾ ಜಂಟಿ ನಿರ್ದೇಶಕರು ಹಾಗೂ ಸದಸ್ಯ ಕಾರ್ಯದರ್ಶಿ, ಸಂಖ್ಯೆ: ಬಿಐಎಪಿಎ/ಟಿಪಿ/ಭೂಉಬ/31/2009-10 ದಿನಾಂಕ: 24.03.2010.
2. ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಮತ್ತು ಆಜ್ಞೆ ಸಂಖ್ಯೆ:ಬಿಎಂಆರ್‌ಡಿಎ/BIAAPA/ಸಿಎಲ್‌ಯು/05/2010-11, ದಿನಾಂಕ: 20-05-2010.

**ಪ್ರಸ್ತಾವನೆ:**

ಮೇಲೆ (1) ಮತ್ತು (2)ರಲ್ಲಿ ಓದಲಾದ ದಿನಾಂಕ: 24-3-2010 ಮತ್ತು 20-5-2010ರ ಪತ್ರಗಳಲ್ಲಿ ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಮತ್ತು ಸದಸ್ಯ ಕಾರ್ಯದರ್ಶಿ, ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರ, ರವರುಗಳು ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಬರುವ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಗಡೇನಹಳ್ಳಿ ಗ್ರಾಮದ ಸರ್ವೆ ನಂ. 22/61-62ಪಿ1 ರಲ್ಲಿ (1 ಎ), 22/64-65 ಪಿ4 (2ಎ), 22/62-63ಪಿ5(2 ಎ), 22/64-65ಪಿ8(2ಎ) ಒಟ್ಟು 7 ಎಕರೆ ವಿಸ್ತೀರ್ಣದ ಪ್ರದೇಶವನ್ನು ವ್ಯವಸಾಯ ವಲಯದಿಂದ ವಸತಿ ಉಪಯೋಗಕ್ಕೆ ಭೂ ಉಪಯೋಗ ಬದಲಾವಣೆ ಮಾಡುವ ಸಂಬಂಧ ಸಾರ್ವಜನಿಕ ಆಕ್ಷೇಪಣೆಗಳನ್ನು ದಿನಾಂಕ 13-11-2009ರ ಪ್ರಜಾವಾಣಿ ಮತ್ತು ಈ ಸಂಜೆ ದಿನಪತ್ರಿಕೆಗಳಲ್ಲಿ ಪ್ರಕಟಿಸಿ, ಸಾರ್ವಜನಿಕರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಿ, ಈ ಸಂಬಂಧ ಯಾವುದೇ ಸಾರ್ವಜನಿಕ ಆಕ್ಷೇಪಣೆಗಳು ಬಂದಿರುವುದಿಲ್ಲವೆಂದು, ನಂತರ ದಿನಾಂಕ: 26-2-2010ರಂದು ನಡೆದ ಪ್ರಾಧಿಕಾರದ 62ನೇ ಸಭೆಯ ವಿಷಯ ಸಂಖ್ಯೆ: 61(4(1)ರಲ್ಲಿ ಪ್ರಸ್ತಾವನೆಯನ್ನು ಪ್ರಾಧಿಕಾರದ ಮುಂದೆ ಮಂಡಿಸಿ, ಪ್ರಾಧಿಕಾರದ ಸಭೆಯು ನಿರ್ಣಯಿಸಿರುವಂತೆ ನಿಗದಿತ ನಮೂನೆಯಲ್ಲಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಗಡೇನಹಳ್ಳಿ ಗ್ರಾಮದ ಸರ್ವೆ ನಂ. 22/61-62ಪಿ1 ರಲ್ಲಿ (1 ಎ), 22/64-65 ಪಿ4(2ಎ) 22/62-63ಪಿ5(2 ಎ), 22/64-65 ಪಿ8(2ಎ) ಒಟ್ಟು 7 ಎಕರೆ ವಿಸ್ತೀರ್ಣದ ಪ್ರದೇಶವನ್ನು ವ್ಯವಸಾಯ ವಲಯದಿಂದ ವಸತಿ ವಲಯಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ.14(ಎ) ರನ್ವಯ ಭೂ ಉಪಯೋಗ ಬದಲಾವಣೆ ಮಾಡಲು ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ನಂತರ, ಸದರಿ ಪ್ರಸ್ತಾವನೆಯನ್ನು ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಇವರು ಪರಿಶೀಲಿಸಿ ಪ್ರಶ್ನಿತ ಮೇಲಿನ ಜಮೀನುಗಳು ಈಗಾಗಲೇ ವಸತಿ ಉದ್ದೇಶಕ್ಕೆ ಭೂ ಪರಿವರ್ತನೆ ಆಗಿದ್ದು, ಈ ಜಮೀನುಗಳು ಒಂಟಿ ಬೆಳವಣಿಗೆ ಆಗದೆ ವಸತಿ ಬೆಳವಣಿಗೆಗಳ ಸಮೀಪದಲ್ಲಿರುವುದರಿಂದ, ಮೇಲಿನ ಜಮೀನುಗಳನ್ನು ವ್ಯವಸಾಯ ವಲಯದಿಂದ ವಸತಿ ವಲಯಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಸರ್ಕಾರದ ಮಂಜೂರಾತಿ ಕೋರಿರುತ್ತಾರೆ. ಕಾರಣ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ನಅಇ 88 ಬಿಎಂಆರ್ 2010, ಬೆಂಗಳೂರು, ದಿನಾಂಕ: 25-06-2010**

ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಮತ್ತು ಸದಸ್ಯ ಕಾರ್ಯದರ್ಶಿ, ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರ, ಇವರುಗಳು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ

ಪರಿಶೀಲಿಸಿ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಗಡೇನಹಳ್ಳಿ ಗ್ರಾಮದ ಸರ್ವೆ ನಂ. 22/61–62ಪಿ1 ರಲ್ಲಿ (1 ಎ), 22/64–65ಪಿ4 (2ಎ), 22/62–63ಪಿ5(2 ಎ), 22/64–65ಪಿ8(2ಎ) ಒಟ್ಟು 7 ಎಕರೆ ವಿಸ್ತೀರ್ಣದ ಪ್ರದೇಶವನ್ನು ವ್ಯವಸಾಯ ವಲಯದಿಂದ ವಸತಿ ವಲಯಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ,14(ಎ)ರ ಪ್ರಕಾರ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತಿಗೊಳ್ಳಪಟ್ಟು ಸರ್ಕಾರದ ಮಂಜೂರಾತಿ ನೀಡಿದೆ.

(1) ಕರ್ನಾಟಕ ನಗರ ಮತ್ತು ಗ್ರಾಮಾಂತರ ಕಾಯ್ದೆ 1961ರ ಕಲಂ. 18ರನ್ವಯ ಶುಲ್ಕ ಪಡೆಯತಕ್ಕದ್ದು;
(2) ಭೂ ಉಪಯೋಗ ಬದಲಾವಣೆಯನ್ನು ಮಹಾಯೋಜನೆಯಲ್ಲಿ ಅಳವಡಿಸಿಕೊಳ್ಳತಕ್ಕದ್ದು;
(3) ವಸತಿ ವಿನ್ಯಾಸಕ್ಕೆ/ಗ್ರೂಪ್ ಹೌಸಿಂಗ್ ಯೋಜನೆಗೆ ಪ್ರಾಧಿಕಾರದ ಅನುಮೋದನೆ ಪಡೆಯತಕ್ಕದ್ದು;
(4) ಮಳೆ ನೀರು ಸಂಗ್ರಹಣೆ ಅಳವಡಿಸಿಕೊಳ್ಳತಕ್ಕದ್ದು;
(5) ವಸತಿ ವಿನ್ಯಾಸ/ಗ್ರೂಪ್ ಹೌಸಿಂಗ್ ಅಭಿವೃದ್ಧಿಗಾಗಿ ಸಂಬಂಧಿಸಿದ ಇಲಾಖೆ/ಸಕ್ಷಮ ಪ್ರಾಧಿಕಾರಗಳಿಂದ ಅಗತ್ಯ ನಿರಾಕ್ಷೇಪಣಾ ಪತ್ರಗಳನ್ನು ಪಡೆಯತಕ್ಕದ್ದು;
(6) ಪ್ರಶ್ನಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಪ್ರಶ್ನಿತ ಜಮೀನಿನ ಉಪಗಮನ ರಸ್ತೆಗೆ ಸೂಕ್ತ ರಸ್ತೆ ಮಾರ್ಜಿನ್‌ನ್ನು ಅಳವಡಿಸಿಕೊಳ್ಳತಕ್ಕದ್ದು;
(7) ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರವು ವಿಧಿಸಬಹುದಾದ ಇತರೆ ಷರತ್ತುಗಳು
(8) ವಲಯ ನಿಯಮಾವಳಿಯಲ್ಲಿನ ಷರತ್ತುಗಳನ್ನು ಕಡ್ಡಾಯವಾಗಿ ಪಾಲಿಸುವುದು;
(9) ಯಾವುದೇ ಸಿವಿಲ್ ವ್ಯಾಜ್ಯಗಳಿದ್ದಲ್ಲಿ, ನ್ಯಾಯಾಲಯದ ಆದೇಶಕ್ಕೆ ಬದ್ಧರಾಗಿರುವ, ಸುಳ್ಳು ಮಾಹಿತಿ ಅಥವಾ ಸಲ್ಲಿಸಿರುವ ಯಾವುದೇ ಮಾಹಿತಿ/ ದಾಖಲೆಗಳು ತಪ್ಪಾಗಿದ್ದಲ್ಲಿ/ಪೋರ್ಜರಿ ಆಗಿದ್ದಲ್ಲಿ ಭೂ ಉಪಯೋಗ ಬದಲಾವಣೆಯು ಸ್ವಯಂಚಾಲಿತವಾಗಿ ರದ್ದಾಗುವ ನಿಬಂಧನೆಗೊಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1883

**ಎಂ.ಎಸ್. ಪ್ರೇಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ದೇವನಹಳ್ಳಿ ತಾಲ್ಲೂಕು, ಕಸಬಾ ಹೋಬಳಿ, ಪಾಳ್ಯ ಗ್ರಾಮದ ಸರ್ವೆ ನಂ.3/5ರಲ್ಲಿನ ಒಟ್ಟು 1 ಎಕರೆ 20 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ವಲಯಕ್ಕೆ ಭೂ ಉಪಯೋಗ ಬದಲಾವಣೆ ಮಾಡುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಇವರ ಟಿಪ್ಪಣಿ ಮತ್ತು ಆಜ್ಞೆ ಸಂಖ್ಯೆ ಬಿಎಂಆರ್‌ಡಿಎ/BIAAPA/73/2009–10, ದಿನಾಂಕ 18–11–2009.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 18–11–2009ರ ಟಿಪ್ಪಣಿ ಮತ್ತು ಆಜ್ಞೆಯಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಮತ್ತು ಸದಸ್ಯ ಕಾರ್ಯದರ್ಶಿ, ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರ ರವರುಗಳು ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಬರುವ ದೇವನಹಳ್ಳಿ ತಾಲ್ಲೂಕು, ಕಸಬಾ ಹೋಬಳಿ, ಪಾಳ್ಯ ಗ್ರಾಮದ ಸರ್ವೆ ನಂ.3/5ರಲ್ಲಿನ ಒಟ್ಟು 1 ಎಕರೆ 20 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ವಲಯಕ್ಕೆ ಭೂ ಉಪಯೋಗ ಬದಲಾವಣೆ ಮಾಡುವ ಸಂಬಂಧ ಸಾರ್ವಜನಿಕ ಆಕ್ಷೇಪಣೆಗಳನ್ನು ದಿನಾಂಕ 14–09–2009ರಂದು ಪ್ರಜಾವಾಣಿ ಮತ್ತು ಈ ಸಂಜೆ ದಿನಪತ್ರಿಕೆಗಳಲ್ಲಿ ಪ್ರಕಟಿಸಿ, ಸಾರ್ವಜನಿಕರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಿ, ಈ ಸಂಬಂಧ ಯಾವುದೇ ಸಾರ್ವಜನಿಕ ಆಕ್ಷೇಪಣೆಗಳು ಬಂದಿರುವುದಿಲ್ಲವೆಂದು, ನಂತರ ದಿನಾಂಕ 27–10–2009ರಂದು ನಡೆದ ಪ್ರಾಧಿಕಾರದ 58ನೇ ಸಭೆಯ ವಿಷಯ ಸಂಖ್ಯೆ 5(5)ರಲ್ಲಿ ಪ್ರಸ್ತಾವನೆಯನ್ನು ಪ್ರಾಧಿಕಾರದ ಮುಂದೆ ಮಂಡಿಸಿ, ಪ್ರಾಧಿಕಾರದ ಸಭೆಯು ನಿರ್ಣಯಿಸಿರುವಂತೆ ನಿಗದಿತ ನಮೂನೆಯಲ್ಲಿ ದೇವನಹಳ್ಳಿ ತಾಲ್ಲೂಕು, ಕಸಬಾ ಹೋಬಳಿ, ಪಾಳ್ಯ ಗ್ರಾಮದ ಸರ್ವೆ ನಂ.3/5ರಲ್ಲಿನ ಒಟ್ಟು 1 ಎಕರೆ 20 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ವಲಯಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ) ರನ್ವಯ ಭೂ ಉಪಯೋಗ ಬದಲಾವಣೆ ಮಾಡಲು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದು, ಸದರಿ ಪ್ರಸ್ತಾವನೆಯನ್ನು ಸರ್ಕಾರದ ಅಪರ ಮುಖ್ಯಕಾರ್ಯದರ್ಶಿಗಳು ಮತ್ತು ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಇವರು ಪರಿಶೀಲಿಸಿ ಮೇಲಿನ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ವಲಯಕ್ಕೆ ಕೆಲವು ನಿಬಂಧನೆಗಳಿಗೆ ಒಳಪಟ್ಟು ಭೂ ಉಪಯೋಗ ಬದಲಾವಣೆ ಮಾಡಲು ಸರ್ಕಾರದ ಮಂಜೂರಾತಿ ಕೋರಿರುತ್ತಾರೆ. ಕಾರಣ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ನಅಇ 380 ಬಿಎಂಆರ್ 2009, ಬೆಂಗಳೂರು, ದಿನಾಂಕ 24–06–2010**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ದೇವನಹಳ್ಳಿ ತಾಲ್ಲೂಕು, ಕಸಬಾ ಹೋಬಳಿ, ಪಾಳ್ಯ ಗ್ರಾಮದ ಸರ್ವೆ ನಂ. 3/5ರಲ್ಲಿನ ಒಟ್ಟು 1 ಎಕರೆ 20 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ವಲಯಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರ ಪ್ರಕಾರ ಭೂ ಉಪಯೋಗ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ಮಂಜೂರಾತಿ ನೀಡಿದೆ.

(1) ಕರ್ನಾಟಕ ನಗರ ಮತ್ತು ಗ್ರಾಮಾಂತರ ಕಾಯ್ದೆ 1961ರ ಕಲಂ 18ರನ್ವಯ ಶುಲ್ಕ ಪಡೆಯತಕ್ಕದ್ದು;
(2) ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಅಳವಡಿಸಿಕೊಳ್ಳತಕ್ಕದ್ದು;
(3) ವಸತಿ ವಿನ್ಯಾಸಕ್ಕೆ/ಗ್ರೂಪ್ ಹೌಸಿಂಗ್ ಯೋಜನೆಗೆ ಪ್ರಾಧಿಕಾರದ ಅನುಮೋದನೆ ಪಡೆಯತಕ್ಕದ್ದು;
(4) ಮಳೆ ನೀರು ಸಂಗ್ರಹಣೆ ಅಳವಡಿಸಿಕೊಳ್ಳತಕ್ಕದ್ದು;
(5) ವಸತಿ ವಿನ್ಯಾಸ/ಗ್ರೂಪ್ ಹೌಸಿಂಗ್ ಅಭಿವೃದ್ಧಿಗಾಗಿ ಸಂಬಂಧಿಸಿದ ಇಲಾಖೆ/ಸಕ್ಷಮ ಪ್ರಾಧಿಕಾರಗಳಿಂದ ಅಗತ್ಯ ನಿರಾಕ್ಷೇಪಣಾ ಪತ್ರಗಳನ್ನು ಪಡೆಯತಕ್ಕದ್ದು;
(6) ಪ್ರಶ್ನಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಪ್ರಶ್ನಿತ ಜಮೀನಿನ ಉಪಗಮನ ರಸ್ತೆಗೆ ಸೂಕ್ತ ರಸ್ತೆ ಮಾರ್ಜಿನ್‌ನ್ನು ಅಳವಡಿಸಿಕೊಳ್ಳತಕ್ಕದ್ದು;
(7) ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರವು ವಿಧಿಸಬಹುದಾದ ಇತರೆ ಷರತ್ತುಗಳು.
(8) ವಲಯ ನಿಯಮಾವಳಿಯಲ್ಲಿನ ಷರತ್ತುಗಳನ್ನು ಕಡ್ಡಾಯವಾಗಿ ಪಾಲಿಸುವುದು;
(9) ಯಾವುದೇ ಸಿವಿಲ್ ವ್ಯಾಜ್ಯಗಳಿದ್ದಲ್ಲಿ, ನ್ಯಾಯಾಲಯದ ಆದೇಶಕ್ಕೆ ಬದ್ಧರಾಗಿರುವ, ಸುಳ್ಳು ಮಾಹಿತಿ ಅಥವಾ ಸಲ್ಲಿಸಿರುವ ಯಾವುದೇ ಮಾಹಿತಿ/ದಾಖಲೆಗಳು ತಪ್ಪಾಗಿದ್ದಲ್ಲಿ/ಫೋರ್ಜರಿ ಆಗಿದ್ದಲ್ಲಿ ಭೂ ಉಪಯೋಗ ಬದಲಾವಣೆಯು ಸ್ವಯಂಚಾಲಿತವಾಗಿ ರದ್ದಾಗುವ ನಿಬಂಧನೆಗೊಳ್ಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1884

**ಎಂ.ಎಸ್. ಪ್ರೇಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಮಾಹಿತಿ ತಂತ್ರಜ್ಞಾನ ಹೂಡಿಕಾ ಪ್ರದೇಶಗಳನ್ನು ಸ್ಥಾಪಿಸುವ ಯೋಜನೆಯ ಅನುಷ್ಠಾನಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** (1) ಭಾರತ ಸರ್ಕಾರದ ಅಧಿಸೂಚನೆ ಸಂಖ್ಯೆ 7/(5) 2006–ಇ, ದಿನಾಂಕ 28–5–2008,
(2) ಸರ್ಕಾರದ ಪತ್ರ ಸಂಖ್ಯೆ ಐಟಿಡಿ 22 ಎಂಡಿಎ 2008, ದಿನಾಂಕ: 15–12–2008.
(3) ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 22 ಎಂಡಿಎ 2008, ದಿನಾಂಕ 23–10–2009.
(4) ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 35 ಎಡಿಎಂ 2010, ದಿನಾಂಕ 15–4–2010.
(5) ನಿರ್ದೇಶಕರು, ಮಾತಂ ಜೈತಂ ನಿರ್ದೇಶನಾಲಯ ಇವರ ಪತ್ರ ಸಂ: ಮಾತಂನಿ/ಲೆಕ್ಕ–1/ಐಟಿಐಆರ್/279/2009–10, ದಿನಾಂಕ 6–7–2010.

**ಪ್ರಸ್ತಾವನೆ :**

ಮಾಹಿತಿ ತಂತ್ರಜ್ಞಾನ ಇಲಾಖೆಯ ಸಂಪರ್ಕ ಮತ್ತು ಮಾಹಿತಿ ತಂತ್ರಜ್ಞಾನ ಮಂತ್ರಾಲಯ, ಭಾರತ ಸರ್ಕಾರ ಇವರು ಮೇಲೆ [1] ರಲ್ಲಿ ಓದಲಾದ ದಿನಾಂಕ 28–5–2008ರ ಗೆಜೆಟ್ ಅಧಿಸೂಚನೆಯಲ್ಲಿ ಮಾಹಿತಿ ತಂತ್ರಜ್ಞಾನ/ಮಾಹಿತಿ ತಂತ್ರಜ್ಞಾನ ಆಧಾರಿತ ಸೇವೆಗಳು ಮತ್ತು ವಿದ್ಯುನ್ಮಾನ ಯಂತ್ರಾಂಶ ಉತ್ಪಾದನಾ ಘಟಕಗಳಲ್ಲಿ ಹೂಡಿಕೆಯನ್ನು ಉನ್ನತೀಕರಿಸುವ ದೃಷ್ಟಿಯಿಂದ ಕನಿಷ್ಠ 40 ಚದರ ಕಿ.ಮೀ. ಕನಿಷ್ಠ ಪ್ರದೇಶಗಳಲ್ಲಿ ಸ್ಥಾಪಿಸಲ್ಪಡುವ ಮಾಹಿತಿ ತಂತ್ರಜ್ಞಾನ ಹೂಡಿಕಾ ಪ್ರದೇಶಗಳ ಸ್ಥಾಪನೆಯ ನೀತಿಯನ್ನು ಘೋಷಿಸಿರುತ್ತಾರೆ. ಅದರಂತೆ, ಬೆಂಗಳೂರು ಅಂತರಾಷ್ಟ್ರೀಯ ವಿಮಾನ ನಿಲ್ದಾಣ [BIAL] ಸಮೀಪದ ಪ್ರದೇಶವನ್ನು ಮಾಹಿತಿ ತಂತ್ರಜ್ಞಾನ ಹೂಡಿಕಾ ಪ್ರದೇಶವನ್ನಾಗಿ ಅಧಿಸೂಚಿಸಲು ರಾಜ್ಯ ಸರ್ಕಾರವು ನಿರ್ಧರಿಸಿದೆ. ಮತ್ತು ಮೇಲೆ [2]ರಲ್ಲಿ ಓದಲಾದ ಪತ್ರದಲ್ಲಿ ಕಿಯೋನಿಕ್ಸ್ ಸಂಸ್ಥೆಗೆ ಭಾರತ ಸರ್ಕಾರದ ಮಾರ್ಗಸೂಚಿಯಂತೆ techno-economic pre-feasibility survey ಕೈಗೊಳ್ಳಲು ಮಾನ್ಯತೆ ಪಡೆದ ಏಜೆನ್ಸಿಗಳಿಂದ ಟೆಂಡರುಗಳನ್ನು ಕರೆಯಲು ನಿರ್ದೇಶನವೂ ನೀಡಲ್ಪಟ್ಟಿದೆ.

ಮೇಲೆ [3] ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಿಯೋನಿಕ್ಸ್ ಸಂಸ್ಥೆಯಿಂದ ಬೆಂಗಳೂರು ಃಖಂಐ ಪ್ರದೇಶದಲ್ಲಿ ಮಾಹಿತಿ ತಂತ್ರಜ್ಞಾನ ಹೂಡಿಕಾ ಪ್ರದೇಶ [ಐಟಿಐಆರ್] ಸ್ಥಾಪಿಸಲು techno-economic pre-feasibility survey ಕೈಗೊಳ್ಳಲು M/s. Deloitte Touche Tohmatsu India Private Limited, India ರವರನ್ನು ನೇಮಿಸಲು ಮಂಜೂರಾತಿ ನೀಡಲಾಗಿದೆ. ಹಾಗೂ ಸದರಿ ಉದ್ದೇಶಕ್ಕಾಗಿ 2009–10ನೇ ಸಾಲಿನಲ್ಲಿ ರೂ. 36,80,000/ಗಳ ಅನುದಾನವನ್ನು ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ [4]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2010–11ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ **"3451–00–090–2–01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ –059 ಇತರೆ ಖರ್ಚುಗಳು [ಯೋಜನೆ]"** ಅಡಿಯಲ್ಲಿ ಒದಗಣೆ ಮಾಡಲಾದ ರೂ. 1000 ಲಕ್ಷಗಳ ಅನುದಾನದ ಪೈಕಿ ಐಟಿಐಆರ್ ಯೋಜನೆಯ ಅನುಷ್ಠಾನಕ್ಕಾಗಿ ರೂ. 150.00 ಲಕ್ಷಗಳ ಅನುದಾನವನ್ನು ಹಂಚಿಕೆಮಾಡಲಾಗಿದೆ.

ಮೇಲೆ [5]ರಲ್ಲಿ ಓದಲಾದ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರ ಪತ್ರದಲ್ಲಿ ಈ ಯೋಜನೆಯ ಅನುಷ್ಠಾನಕ್ಕಾಗಿ ಟೆಂಡರುಗಳ ಪರಿಶೀಲನೆ, ಜಾಹೀರಾತು ವೆಚ್ಚಗಳು, ಯೋಜನೆಯ ಅನುಷ್ಠಾನದಿಂದ ಉಂಟಾಗುವ ಸಾಮಾಜಿಕ ಪರಿಣಾಮಗಳ ಮತ್ತು ಪರಿಸರ ಮೇಲೆ ಉಂಟಾಗುವ ಪರಿಣಾಮಗಳು, ನಕ್ಷೆ ತಯಾರಿಕೆ, ಮುದ್ರಣ ಮತ್ತಿತರ ವೆಚ್ಚಕ್ಕಾಗಿ ರೂ. 1,54,37,795/–ಗಳು ಬೇಕಾಗುತ್ತದೆಂದು ತಿಳಿಸಿ, ಕಿಯೋನಿಕ್ಸ್ ಸಂಸ್ಥೆಗೆ ರೂ. 150.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಐಟಿಐಆರ್ ಯೋಜನೆಯ ಅನುಷ್ಠಾನಕ್ಕಾಗಿ ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆಮಾಡಲಾಗಿರುವ ರೂ. 150 ಲಕ್ಷಗಳ ಅನುದಾನದಲ್ಲಿ ಶೇಕಡ 50 ರಷ್ಟು ಅಂದರೆ ರೂ. 75.00 ಲಕ್ಷಗಳನ್ನು ಸದ್ಯಕ್ಕೆ ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 22 ಎಂಡಿಎ 2008 [ಪಿ], ಬೆಂಗಳೂರು, ದಿನಾಂಕ 20–07–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಐಟಿಐಆರ್ ಯೋಜನೆಯ ಅನುಷ್ಠಾನಕ್ಕಾಗಿ ಟೆಂಡರುಗಳ ಪರಿಶೀಲನೆ, ಜಾಹೀರಾತು ವೆಚ್ಚಗಳು, ಯೋಜನೆಯ ಅನುಷ್ಠಾನದಿಂದ ಉಂಟಾಗುವ ಸಾಮಾಜಿಕ ಪರಿಣಾಮಗಳ ಮತ್ತು ಪರಿಸರ ಮೇಲೆ ಉಂಟಾಗುವ ಪರಿಣಾಮಗಳು, ನಕ್ಷೆ ತಯಾರಿಕೆ, ಮುದ್ರಣ ಮತ್ತಿತರ ವೆಚ್ಚಕ್ಕಾಗಿ ರೂ. 75.00 ಲಕ್ಷಗಳ [ರೂ. ಎಪ್ಪತ್ತೈದು ಲಕ್ಷಗಳು ಮಾತ್ರ] ಅನುದಾನವನ್ನು ಕಿಯೋನಿಕ್ಸ್ ಸಂಸ್ಥೆಗೆ ವಿತರಿಸುವ ಸಂಬಂಧ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ನಿರ್ದೇಶಕರು, ಕೆಬಿಟ್ಸ್ ಸಂಸ್ಥೆ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **'3451–00–090–2–01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ– 059–ಇತರೆ ಖರ್ಚುಗಳು [ಯೋಜನೆ]'** ಇದರ ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರು ಅನುದಾನದ ಬಳಕೆಯ ಬಗ್ಗೆ ವ್ಯವಸ್ಥಾಪಕ ನಿರ್ದೇಶಕರು, ಕಿಯೋನಿಕ್ಸ್ ಸಂಸ್ಥೆ ಇವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16.5.2009 ರಲ್ಲಿನ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1885

**ಎಂ.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## COMMERCE AND INDUSTRIES SECRETARIAT

**Sub:** Approval to the Project Proposal of M/s. Karnataka Ferro Concentrates Pvt. Ltd., to establish a **"4 Million TPA Iron Ore Beneficiation Plant & 1.20 Million TPA Pelletisation Plant "** at Nagalapur Village, Hospet Taluk, Bellary District.

**Read:** Proceedings of the 23rd State High Level Clearance Committee (SHLCC) Meeting held on 19.06.2010.

**PREAMBLE:**

M/s. Karnataka Ferro Concentrates Pvt. Ltd., proposes to establish a **"4 Million TPA Iron Ore Beneficiation Plant & 1.20 Million TPA Pelletisation Plant "** at Nagalapur Village, Hospet Taluk, Bellary District. With an investment of Rs. 639.54 crores, generating employment to about 350 persons.

In the 23rd State High Level Clearance Committee (SHLCC) Meeting held on 19.06.2010, the proposal of the Company was discussed and approved.

Government has examined the recommendations made by the State High Level Clearance Committee in its 23rd Meeting held on 19.06.2010, in all aspects.

Hence the foolowing Order.

**GOVERNMENT ORDER NO: CI 376 SPI 2010, BANGALORE, DATED; 14.07.2010**

Government is pleased to accord in principle approval to the Project Proposal of M/s. Karnataka Ferro Concentrates Pvt. Ltd.,to establish a **"4 Million TPA Iron Ore Beneficiation Plant & 1.20 Million TPA Pelletisation Plant "** at Nagalapur Village, Hospet Taluk, Bellary District. With an investment of Rs.639.54 crores, generating employment to about 350 persons and extend the following infrastructure facilities, incentives and concessions.

**INFRASTRUCTURE FACILITIES:**

| | | |
|---|---|---|
| **1.** | **Land:** | 1488 acres - KIADB to acquire and allot as SUC at Sy.No.104, 106 and 107 of Nagalapur Village, Hospet Taluk, Bellary District. |
| **2.** | **Water:** | 15.4 Million LPD from nearest water source, subject to approval of the Water Resources Department. |
| **3.** | **Power:** | 24000 KVA to be serviced by GESCOM |
| **4.** | **Incentives & Concessions** | As per prevailing Industrial policy of the State. |

**GENERAL TERMS AND CONDITIONS:**

1. **Ore:-** The ore based industries to Make arrangements on their own for the ore requirement and State Government does not guarantee the ore for these projects.
2. **Environment:** The promoters to obtain CFE and CFO from KSPCB and environmental clearance from MOEF, GOI.

3. **Employment:** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and commerce for monitoring.
4. **Social Infrastructure Development:**- The Company is advised to take up social infrastructure development projects In the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.

**5.Others :**

a) The project proponents shall provide employment to at least one member of the family of each land looser as the land is being acquired through KIADB

b) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.

C) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department This approval is valid for a period of two years from the date of issue.

By Order and in the name of the Governor of Karnataka

(**Aparna Pavate)**

Desk Officer (Technical Cell)

Commerce & Industries Department

P.R. 2021

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

## ತಿದ್ದುಪಡಿ ಆದೇಶ

**ಸಂಖ್ಯೆ: ಐಟಿಡಿ 22 ಎಂಡಿಎ 2008 [ಪಿ] ಬೆಂಗಳೂರು ದಿನಾಂಕ : 21–07–2010**

**ವಿಷಯ :** ಮಾಹಿತಿ ತಂತ್ರಜ್ಞಾನ ಹೂಡಿಕಾ ಪ್ರದೇಶಗಳನ್ನು ಸ್ಥಾಪಿಸುವ ಯೋಜನೆಯ ಅನುಷ್ಠಾನಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

ಮೇಲಿನ ವಿಷಯಕ್ಕೆ ಸಂಬಂಧಪಟ್ಟಂತೆ, ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 22 ಎಂಡಿಎ 2008 [ಪಿ] ದಿನಾಂಕ 20–07–2010ರಲ್ಲಿನ ಆದೇಶ ಭಾಗದ ಎರಡನೆಯ ಕಂಡಿಕೆಯ ನಾಲ್ಕನೇ ಸಾಲಿನಲ್ಲಿನ **"ಕೆಬಿಟ್ಸ್ ಸಂಸ್ಥೆ"** ಎಂಬುದಕ್ಕೆ ಬದಲಾಗಿ **ಕಿಯೋನಿಕ್ಸ್ ಸಂಸ್ಥೆ'** ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 2022

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ಕಸಂವಾಪ್ರ 78ಕರಅ 2010 ಬೆಂಗಳೂರು ದಿನಾಂಕ : 20–07–2010**

**ವಿಷಯ :** ರಾಜ್ಯದ ವಿವಿಧ ಜಿಲ್ಲಾ ಕೇಂದ್ರಗಳಲ್ಲಿ ಇರುವ ಕಲಾಭವನಗಳನ್ನು ಅಕಾಡೆಮಿಗಳ ಅಧಿಕೃತ ಕಾರ್ಯಕ್ರಮಗಳಿಗೆ ಉಚಿತವಾಗಿ ನೀಡುವ ಬಗ್ಗೆ.

ರಾಜ್ಯದ ವಿವಿಧ ಅಕಾಡೆಮಿಗಳು ವರ್ಷದುದ್ದಕ್ಕೂ ಹಲವಾರು ನಾಟಕೋತ್ಸವಗಳು, ವಿಚಾರಸಂಕಿರಣಗಳು ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅವನ್ನು ನಡೆಸಲು ಜಿಲ್ಲಾ ಕೇಂದ್ರಗಳಲ್ಲಿರುವ ಕಲಾಭವನಗಳನ್ನು ಅವಲಂಬಿಸಿರುತ್ತವೆ. ಆಯಾ ಜಿಲ್ಲಾಧಿಕಾರಿಗಳ ಉಸ್ತುವಾರಿಯಲ್ಲಿರುವ ಈ ಕಲಾಭವನಗಳನ್ನು ಅಕಾಡೆಮಿಗಳು ನಡೆಸುವ ಅಧಿಕೃತ ಕಾರ್ಯಕ್ರಮಗಳಿಗೆ ಉಚಿತವಾಗಿ ನೀಡುವುದು ಅಪೇಕ್ಷಣೀಯ ಮತ್ತು ಸಮಂಜಸ ಎಂದು ಅಕಾಡೆಮಿಗಳ ಅಧ್ಯಕ್ಷರುಗಳು ಸರ್ಕಾರವನ್ನು ಕೋರಿರುತ್ತಾರೆ. ಸರ್ಕಾರವು ಈ ಪ್ರಸ್ತಾವನೆ ಪರಿಶೀಲಿಸಿದೆ. ಅದರಂತೆ ರಾಜ್ಯದ ವಿವಿಧ ಅಕಾಡೆಮಿಗಳು ಹಮ್ಮಿಕೊಳ್ಳುವ ಅಧಿಕೃತ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿಗಳು ತಮ್ಮ ಉಸ್ತುವಾರಿಯಲ್ಲಿರುವ ಜಿಲ್ಲಾ ರಂಗಮಂದಿರ ಹಾಗೂ ಕಲಾಭವನಗಳನ್ನು ಉಚಿತವಾಗಿ ನೀಡುವಂತೆ ಈ ಮೂಲಕ ರಾಜ್ಯದ ಎಲಾ ಜಿಲ್ಲಾಧಿಕಾರಿಗಳಿಗೆ ತಿಳಿಸಲಾಗಿದೆ.

**ಹೆಚ್.ವಿ. ರಾಮಚಂದ್ರರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

ಪಿ.ಆರ್. 2023

## ಜಲಸಂಪನ್ಮೂಲ ಸಚಿವಾಲಯ

**ವಿಷಯ** : ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕು ಉತ್ತೂರ–ಜಾಲಿಬೇರ ಗ್ರಾಮದ ಏತ ನೀರಾವರಿ ಯೋಜನೆ ಕಾಮಗಾರಿಗಾಗಿ ಅಗತ್ಯವಿರುವ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಗಾಗಿ ಮುಂಗಡ ಹಣ ಪಾವತಿಸುವ ಕುರಿತು.

**ಓದಲಾಗಿದೆ** : ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ದಿ:23/07/10ರ ಪತ್ರದ ಸಂಖ್ಯೆ: ಮುಇಂ/ಸನೀಉವ/ ಭೂಸ್ವಾ/10–11/4203.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 23/07/2010ರ ಪತ್ರದಲ್ಲಿ ಸಣ್ಣನೀರಾವರಿ ಉತ್ತರ ವಲಯದ ಮುಖ್ಯ ಇಂಜಿನೀಯರ್‌ರವರು ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕು ಉತ್ತೂರ–ಜಾಲಿಬೇರ ಗ್ರಾಮದ ಏತ ನೀರಾವರಿ ಯೋಜನೆ ಕಾಮಗಾರಿಗಾಗಿ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಅವಾರ್ಡ್ ಪೂರ್ವ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಲು ರೂ. 6,76,000–00 ಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಕಂದಾಯ ಇಲಾಖೆಯ ಸುತ್ತೋಲೆ ಸಂಖ್ಯೆ; ಕಂಇ 42 ಭೂಸ್ವಾಹ 2000, ದಿನಾಂಕ: 08/10/2001 ರಲ್ಲಿ ಸೂಚಿಸಿರುವಂತೆ ಭೂಸ್ವಾಧೀನ ಪ್ರಕ್ರಿಯೆಗಾಗಿ ಸಂಭವನೀಯ ವೆಚ್ಚದ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡಬೇಕಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 98 ಭೂಸ್ವಾಪ್ರ 2010 ಬೆಂಗಳೂರು ದಿನಾಂಕ: 03/08/2010**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕು ಉತ್ತೂರ–ಜಾಲಿಬೇರ ಗ್ರಾಮದ ಏತ ನೀರಾವರಿ ಯೋಜನೆ ಕಾಮಗಾರಿಗಾಗಿ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಒಟ್ಟು ಮುಂಗಡ ಹಣ ರೂ. 6,76,000–00 ಗಳನ್ನು (ಆರು ಲಕ್ಷದ ಎಪ್ಪತ್ತಾರು ಸಾವಿರ ರೂಪಾಯಿಗಳು ಮಾತ್ರ) ಕಾಮಗಾರಿಗೆ ಅಗತ್ಯವಿರುವ ಭೂಸ್ವಾಧೀನದ ವಿಸ್ತೀರ್ಣದ ಬಗ್ಗೆ ದೃಢೀಕರಿಸಿಕೊಂಡು ಅದಕ್ಕನುಗುಣವಾಗಿ ಮುಂಗಡ ಹಣವನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಠೇವಣಿ ಮಾಡುವ ಷರತ್ತಿಗೊಳಪಟ್ಟು ಸರ್ಕಾರವು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "4702–0–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು– ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ2008 ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ 2024

**ಹೆಚ್.ಎಸ್. ಉದಯಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ)
ಜಲಸಂಪನ್ಮೂಲ ಇಲಾಖೆ. (**ಸಣ್ಣ ನೀರಾವರಿ**).

## ಒಳಾಡಳಿತ ಸಚಿವಾಲಯ

**ವಿಷಯ** : ಶ್ರೀ ರಾಜಣ್ಣ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ(ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಅರಸೀಕೆರೆರವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ, ತೃಪ್ತಿಕರವೆಂದು ಘೋಷಿಸುವ ಕುರಿತು.

**ಓದಲಾಗಿದೆ**

1. ಸರ್ಕಾರದ ಅಧಿಸೂಚನೆ ನಂ. ಒಇ 845 ಪಿಪಿಇ 2005,ದಿನಾಂಕ : 03.05.2006.
2. ಸರ್ಕಾರದ ಆದೇಶ ಸಂ: ಒಇ 350 ಪಿಪಿಇ 2009, ದಿನಾಂಕ: 23.10.2009.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂ: ಡಿಪಿಎನ್/ಸಿಶಾ.1/37(41)/2008–09, ದಿನಾಂಕ; 03.04.2010.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 03/05/2006ರ ಸರ್ಕಾರದ ಅಧಿಸೂಚನೆಯ ಕ್ರಮ ಸಂಖ್ಯೆ: 41 ರನ್ವಯ ಶ್ರೀ ರಾಜಣ್ಣ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ(ಕಿವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಅರಸೀಕೆರೆರವರು ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಹುದ್ದೆಗೆ ನೇರ ನೇಮಕಾತಿ ಮೂಲಕ ನೇಮಕಗೊಂಡು, ದಿನಾಂಕ: 11.05.2006ರ ಪೂರ್ವಾಹ್ನದಿಂದ ಕಾರ್ಯನಿರ್ವಹಿಸುತ್ತಿದ್ದಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ:23.10.2009ರ ಸರ್ಕಾರದ ಆದೇಶದನ್ವಯ, ಎರಡು ವರ್ಷಗಳ ಪರಿವೀಕ್ಷಣಾ ಅವಧಿಯನ್ನು ನಿಯಮಾನುಸಾರ ದಿನಾಂಕ:10.05.2008 ರಂದು ಪೂರೈಸಿದ್ದಾರೆಂದು ಘೋಷಿಸಬೇಕಾಗಿದ್ದು, ಸದರಿ ಅಧಿಕಾರಿಯು ಹುದ್ದೆಗೆ ನಿಗದಿಪಡಿಸಲಾಗಿದ್ದ ಇಲಾಖಾ ಪರೀಕ್ಷೆಗಳಲ್ಲಿ ಒಂದಾದ ಅಕೌಂಟ್ಸ್ ಹೈಯರ್ ಪರೀಕ್ಷೆಯನ್ನು ಉತ್ತೀರ್ಣರಾಗದಿದ್ದರಿಂದ, ದಿನಾಂಕ: 11.05.2008ರಿಂದ ದಿನಾಂಕ 10.11.2009ರವರೆಗೆ ವಿಸ್ತರಿಸಲಾಗಿದೆ.

ಮೇಲೆ (3) ರಲ್ಲಿ ಓದಲಾದ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದಲ್ಲಿ ದಿನಾಂಕ: 03.04.2010ರಲ್ಲಿ ಶ್ರೀ ರಾಜಣ್ಣರವರ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯು ದಿನಾಂಕ:11.05.2008ಕ್ಕೆ ಪೂರ್ಣಗೊಂಡಿರುತ್ತದೆ. ಸದರಿ ಅಧಿಕಾರಿಯು ಹುದ್ದೆಗೆ ನಿಗದಿಪಡಿಸಿದ್ದ ಇಲಾಖಾ ಪರೀಕ್ಷೆಗಳಲ್ಲಿ ಜನರಲ್ ಲಾ ಭಾಗ–1, ಪತ್ರಿಕೆ–2ರಲ್ಲಿ ಉತ್ತೀರ್ಣರಾಗಿ, ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಸದರಿ ಪರಿವೀಕ್ಷಣಾ ಅವಧಿಯಲ್ಲಿ ಉತ್ತೀರ್ಣತೆ ಹೊಂದದೇ ಇದ್ದುದ್ದರಿಂದ, ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ದಿನಾಂಕ:10.11.2009ರವರೆಗೆ

ಪರಿವೀಕ್ಷಣಾವಧಿಯನ್ನು ವಿಸ್ತರಿಸಿದೆ. ದಿನಾಂಕ:29.08.2009ರಂದು ನಡೆದ ಪರೀಕ್ಷೆಯಲ್ಲಿ ಉತ್ತೀರ್ಣತೆ ಹೊಂದಿದ್ದು, ಪರೀಕ್ಷಾ ಫಲಿತಾಂಶವು ದಿನಾಂಕ: 03.12.2009ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾಗಿರುತ್ತದೆ. ಕರ್ನಾಟಕ ನಾಗರೀಕಾ ಸೇವಾ(ಸೇವೆ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974ರ ನಿಯಮ 5(5)ರನ್ವಯ, ಕನ್ನಡ ಭಾಷಾ ಪರೀಕ್ಷೆಯಿಂದ ವಿನಾಯಿತಿ ನೀಡಲಾಗಿದೆ. ಸದರಿ ಅಧಿಕಾರಿಯವರು ಈ ಅವಧಿಯಲ್ಲಿ ಇಲಾಖೆಯ ಅವಕೃಪೆಗೆ ಒಳಗಾಗಿರುವುದಿಲ್ಲ. ಅಧಿಕಾರಿಯವರ ಮೇಲೆ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಹಾಗೂ ಹೂಡುವ ಪ್ರಕರಣಗಳು ಇರುವುದಿಲ್ಲ. ಸದರಿ ಅಧಿಕಾರಿಯವರ 2006–07 ರಿಂದ 2008–09ರ ಸಾಲಿನ ವಾರ್ಷಿಕ ಕಾರ್ಯ ನಿರ್ವಹಣಾ ವರದಿಗಳಲ್ಲಿ ಯಾವುದೇ ವ್ಯತಿರಿಕ್ತ ಷರಾ ಇರುವುದಿಲ್ಲ. ಆದ್ದರಿಂದ, ಸದರಿ ಅಧಿಕಾರಿಯವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4ರ ಉಪನಿಯಮ (1)(ಎ) ಅನ್ವಯ ದಿನಾಂಕ:11.11.2009 ರಿಂದ 03.12.2009ರವರೆಗೆ ವಿಸ್ತರಿಸಿ, ಸದರಿ ನಿಯಮದ ನಿಯಮ 5ರ ಉಪನಿಯಮ (1)ಎರ ಅನುಸಾರ ದಿನಾಂಕ:04.12.2009 ರಿಂದ ಪರಿವೀಕ್ಷಣಾವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ನಂ.ಒಇ 137 ಪಿಪಿಇ 2010 ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2010**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರೀಕ ಸೇವೆಗಳು (ಪರಿವೀಕ್ಷಣಾ) ನಿಯಮಗಳು 1977ರ 4ನೇ ನಿಯಮದ ಉಪನಿಯಮ (1)(ಎ)ರಲ್ಲಿನ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಜಣ್ಣ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ(ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಅರಸೀಕೆರೆರವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ:11.11.2009 ರಿಂದ 02.12.2009ರವರೆಗೆ ವಿಸ್ತರಿಸಿ, 1977ರ ಕರ್ನಾಟಕ ನಾಗರೀಕ ಸೇವೆಗಳ (ಪರಿವೀಕ್ಷಣಾ) ನಿಯಮಗಳ ನಿಯಮ 5(1)(ಎ)ರ ಅನ್ವಯ ದಿನಾಂಕ:03.12.2009ರಂದು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ 2026

**ಕೆ.ಸಿ.ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸ ಮತ್ತು ಅಭಿಯೋಗಗಳು)

## INFRASTRUCTURE DEVELOPMENT SECRETARIAT

**Sub:** Development of Monorail Corridor on DBOT basis constitution of Scrutiny Committee for examination of final proposal submitted by M/s Scomi Geodesic

**Read:** 1. The Karnataka Transparency in Public Procurement Rules 2000
**2.** Proceedings of the 6th SLSWA held on19-09-2009

**PREAMBLE:**

In the 6th SLSWA held on 19-09-2009 the committee had given permission to proceed to M/s Scomi Geodesic to take up the studies for the corridor under consideration.

M/s Scomi Geodesic has handed over the proposal on 4th june 2010 for the corridor under consideration (from Majestic to Agara junction 15.9 Km) to BARL (Bangalore Airport Rail Link),which is the nodal agency for implementing monorail across the state as per the GO.

In terms of Karnataka Transparency in Public Procurement Rules 2000, the tender accepting authority is required to appoint the "Tender Scrutiny Committee" for undertaking task of tender opening and tender evaluation. Accordingly. it is proposed to constitute a Tender Scrutiny Committee as required under the KTPP Act. Hence this Order.

**GOVERNMENT ORDER NO: IDD 117 ITS 2010, BANGALORE DATED: 23.07.2010**

In the circumstances, explained in the preamble, a Tender Scrutiny Committee (TSC) is constituted to undertake the scrutiny of tenders including the initial proposal from project initiator with the following members:

i. Shri C. Jayaram- Director BARL
ii. Shri. K.L. Lokanatha- Director PPP cell vikasa soudha Bangalore
iii. Shri. R.K. Sahu- PPP Expert PPP cell

2. The Tender Scrutiny Committee shall carry out scrutiny of the tenders strictly in accordance with evaluation criteria indicated in RFQ document and in accordance with the provisions contained in the KTPP Act and rules.
3. The Tender scrutiny committee will seal and witness all the bids received in physical mode and open the same publicly on the due dates.
4. The Tender Scrutiny Committee shall ensure the confidentiality of the process of tender evaluation.

By Order and in the name of the Governor of Karnataka

**R. Shivalingaiah**

P.R. 2027

Under Secretary to Govt. PPP Cell,
Infrastructure Development Department

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ** : ರಾಜ್ಯಮಟ್ಟದ ಆಯ್ಕೆ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರುಗಳಿಗೆ ಉಪಸ್ಥಿತಿ ಭತ್ಯೆಯನ್ನು (Sitting Fee) ನೀಡುವ ಬಗ್ಗೆ.

**ಓದಲಾಗಿದೆ** :
1. ಅಧಿಸೂಚನೆ ಸಂಖ್ಯೆ: ಮಮಇ 255 ಮಭಾಬ 2008, ದಿನಾಂಕ:06.05.2010.
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಏಕ ಕಡತ ಪ್ರಸ್ತಾವನೆ ಸಂಖ್ಯೆ: ಮಮಇ: ಪಿಡಿಎಂ:ಪಅ–2:24:2010–11, ದಿನಾಂಕ: 13.05.2010

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ರ ಅಧಿಸೂಚನೆಯಲ್ಲಿ ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ನಿಯಮಗಳು 2007ರ ನಿಯಮ 91ರ ಅನ್ವಯ ಬಾಲನ್ಯಾಯ ಮಂಡಳಿ ಮತ್ತು ಮಕ್ಕಳ ಕಲ್ಯಾಣ ಸಮಿತಿಯ ಸದಸ್ಯರನ್ನು ಅಯ್ಕೆ ಮಾಡಲು ಈ ಕೂಡಲೇ ಜಾರಿಗೆ ಬರುವಂತೆ 3 ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಅಧ್ಯಕ್ಷರು/ಸದಸ್ಯರುಗಳನ್ನೊಳಗೊಂಡ ಆಯ್ಕೆ ಸಮಿತಿಯನ್ನು ರಚಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (2)ರ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಏಕಕಡತದಲ್ಲಿ, ಬಾಲನ್ಯಾಯ ಕಾಯ್ದೆ (ರಕ್ಷಣೆ ಮತ್ತು ಪೋಷಣೆ) 2000ರ ಪ್ರಕರಣ 4 ಮತ್ತು ಪ್ರಕರಣ 29 ರಲ್ಲಿ ಸಮಾಜ ಕಾರ್ಯಕರ್ತರನ್ನು ಹಾಗೂ ಸದಸ್ಯರುಗಳನ್ನು ಒಳಗೊಂಡಂತೆ ಬಾಲ ನ್ಯಾಯ ಮಂಡಳಿಗಳನ್ನು ಮತ್ತು ಮಕ್ಕಳ ಕಲ್ಯಾಣ ಸಮಿತಿಗಳನ್ನು ರಚಿಸಬೇಕಾಗಿದ್ದು, ಆಯ್ಕೆ ಸಮಿತಿಯು ಒಬ್ಬ ಅಧ್ಯಕ್ಷರು ಮತ್ತು ಆರು ಸದಸ್ಯರನ್ನೊಳಗೊಂಡಿದ್ದು, ಈಗಾಗಲೇ ಪ್ರಕಟಣೆಯ ಮೂಲಕ ಬಂದಿರುವ ಅರ್ಜಿಗಳಲ್ಲಿ ಸಂದರ್ಶನದ ಮೂಲಕ ಆಯ್ಕೆ ಮಾಡಬೇಕಾಗಿರುತ್ತದೆ. ಈ ಪ್ರಕ್ರಿಯೆ ಪೂರ್ಣಗೊಳಿಸಲು 2 ರಿಂದ 5 ಸಿಟ್ಟಿಂಗ್‌ಗಳು ಬೇಕಾಗಿದ್ದು, ಈ ಜವಾಬ್ದಾರಿಯನ್ನು ನಿರ್ವಹಿಸಲು ಆಯ್ಕೆ ಸಮಿತಿ ಅಧ್ಯಕ್ಷರು/ಸದಸ್ಯರಿಗೆ ಉಪಸ್ಥಿತಿ ಭತ್ಯೆಯನ್ನು (Sitting Fee) ನೀಡಬೇಕಾಗಿರುವುದರಿಂದ, ಆಯ್ಕೆ ಸಮಿತಿ ಅಧ್ಯಕ್ಷರು/ಸದಸ್ಯರಿಗೆ ಉಪಸ್ಥಿತಿ ಭತ್ಯೆಯನ್ನು (Sitting Fee) ನೀಡಬಹುದಾಗಿದ್ದು, ಅಧ್ಯಕ್ಷರಿಗೆ ರೂ.2500/–ರಂತೆ ಮತ್ತು ಸದಸ್ಯರುಗಳಿಗೆ (Non-Official) ರೂ.1500/– ರಂತೆ ಸಂದರ್ಶನಕ್ಕೆ ಹಾಜರಿದ್ದ ದಿನಗಳಿಗೆ ಮಂಜೂರು ಮಾಡಬಹುದಾಗಿದ್ದು, ಸದರಿ ಪ್ರಸ್ತಾವನೆಗೆ ಮಂಜೂರಾತಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಈ ಕೆಳಗೆ ಸೂಚಿಸಿದಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 101 ಮಭಾಬ 2010. ಬೆಂಗಳೂರು, ದಿನಾಂಕ: 3ನೇ ಆಗಸ್ಟ್ 2010**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ರಾಜ್ಯ ಮಟ್ಟದ ಆಯ್ಕೆ ಸಮಿತಿ ಅಧ್ಯಕ್ಷರಿಗೆ ಪ್ರತಿದಿನದ ಉಪಸ್ಥಿತಿ ಭತ್ಯೆಯನ್ನು ರೂ. 2000/– (ಎರಡು ಸಾವಿರ ರೂಪಾಯಿಗಳು ಮಾತ್ರ) ಹಾಗೂ ಅಧಿಕಾರೇತರ ಸದಸ್ಯರ ಉಪಸ್ಥಿತಿ ಭತ್ಯೆಯನ್ನು ರೂ.1000/– (ಒಂದು ಸಾವಿರ ರೂಪಾಯಿಗಳು ಮಾತ್ರ) ರಂತೆ ಪಾವತಿಸಲು ಮಂಜೂರಾತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2235–02–106–0–08. (ಯೋಜನೇತರ)–051 ಸಾಮಾನ್ಯ ವೆಚ್ಚ ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 353 ವೆಚ್ಚ–3/10.ದಿನಾಂಕ: 20.07.2010 ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ 2028

**ವಿ.ಶಿವಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ–1
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಆರ್ಥಿಕ ಸಚಿವಾಲಯ

### ತಿದ್ದುಪಡಿ

ಸಂಖ್ಯೆ: ಆಇ 145 ರಾಲೆಪ 2010 (3) ಬೆಂಗಳೂರು ದಿನಾಂಕ 30–09–2010

**ವಿಷಯ:** ಶ್ರೀ ಎ. ಲೋಕೇಶ್, ಉಪ ನಿಯಂತ್ರಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರನ್ನು ರಾಜ್ಯ ಲೆಕ್ಕಪತ್ರ ಇಲಾಖೆಯ ಉಪ ನಿಯಂತ್ರಕರ ಹುದ್ದೆಗೆ ವಿಲೀನಗೊಳಿಸುವ ಬಗ್ಗೆ.

ಮೇಲಿನ ವಿಷಯ ಕುರಿತು ಹೊರಡಿಸಿದ ಸರ್ಕಾರಿ ಆದೇಶ ಸಂಖ್ಯೆ: ಆಇ 208 ರಾಲೆಪ 2008, ದಿನಾಂಕ: 7–12–2009ರ ಆದೇಶ ಭಾಗದ ಎರಡನೇ ಕಂಡಿಕೆಯಲ್ಲಿನ ಪದಪುಂಜ **"ಮೊದಲನೆ ಪರಂತುಕ"** ಬದಲಾಗಿ **"ಎರಡನೆ ಪರಂತುಕ"** ವೆಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2581

**ಎನ್. ಶ್ರೀನಿವಾಸ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)